೧೮|| ಇಂದಿರನಕ್ಕುಂ [1]ಮೂಷಕ |
ವೃಂದಚ್ಛಾಯಾ ವಿರಾಜಿತಂ ಕರ್ಗಲ್ಪ |
ಣ್ಣಿಂದದೆ ಕೇಸರವಾ ನೋಡೆ |
ಯಿಂದವನನ್ನನುಕರಿಸಿ ತೋರ್ಪೊಡದು ಪುನ್ನಾಹಂ || ೨೯ ||

ಪೆಸರಿಡಲೆಂತುಂಬಾರದ |
[2]ಕುಸುಮದ ವರ್ಣಂ ವಿರಾಜಿಸುತ್ತಿರೆ ವಿಹಗ– ||
ಪ್ರ(ಸ)ಕರದೊಳೊಂದೊಂದಱ ರುಚಿ |
ಯೆಸೆವ ಹರಿಗೆ ಮೃಗದ ಪೆಸರನಿಡುಗನುನಯದಿಂ || ೩೦ ||

ನಿರ್ಣೀತವಾಗಿ ಪೇೞ್ದೀ |
ವರ್ಣಕದೊಳ್ ಶುಭಮನಶುಭಮಂ ಪ್ರಕಟಂ ವ್ಯಾ ||
ವರ್ಣಿಸುವೆಂ ವಾಜಿಗೆ [3]ಸಿತ |
ವರ್ಣಮೆ ವರ್ಣಂಗಳೊಳ್ ಪ್ರಧಾನಂ ಶುಭದಂ || ೩೧ ||

ಶರದಭ್ರಂ ನಭದೊಳ್ ಹಿಮ |
ಕರನಿರುಳೊಳ್ ಬೆಳಗುವಂತೆ ನಾನಾವರ್ಣಂ ||
ಬೆರಸೆ ನಿಜದ್ಯುತಿಯಂ ಪಾಂ |
ಡರ ಮಂಡಲ ವಾಜಿಗಳ್ಗೆ ವರ್ಣಾಂತರದೊಳ್ || ೩೨ ||

ಮಿಶ್ರಿತವರ್ಣಾದಿಗಳೊಳೆ ಸ |
ಮಶ್ರೀ(ಕ)ಯಂ ಶ್ವೇತಮಂಡಲಂ ಪಿರಿದಾದಂ ||
ದಶ್ರೀಕಂ ಶ್ವೇತೇತರ |
ಮಿಶ್ರಿತವರ್ಣಂಗಳಾಗೆ ಮಿಗಿಲತಿಶುಭದಂ || ೩೩ ||

ಅಮಳಜಲಧರದ ಸಮಸಂ |
ಕುಳಮಂ ಬಾಂದೊಱೆಯುಮಂ ರಜತಶೈಲಮುಮಂ ||
ಹಿಮಕರವಿಚಿತ್ರವರ್ಣದ |
ಪವಳದ ಗೃಹದಂದಮಾಗಿ ತೋರ್ಪೊಡೆ ಶುಭದಂ || ೩೪ ||

ತಲೆಯುಂ ಪೊಡಲುಂ ಪಾವಸೆ |
ಶಿಲೆಯಂ ಬೇರ್ಕೊಳೆದು ಬಿೞ್ದ ಧಾತ್ರೀರುಹಮಂ ||
ಜಲಕಾನಲ ವರ್ಣದ ಸಂ |
ಕುಲಮುಮನನುಕರಿಸಿ ತೋರ್ಪ ಬೆಳ್ಪು ಕನಿಷ್ಠಂ || ೩೫ ||

1 ಪಾವಕ. 2 ಪಸುವಿನ, ಕುಸುರಿಯ. 3 ಸಿತವರ್ಣಂ ವರ್ಣಕ್ಕಮಂತತಿ ಶುಭದಂ.

ಕಂ॥ ಬಳೆಗಣ್ಣೆಂಬರ್ ಪಾಱುಂ |
ಬಳೆಯಂದದ ಬಿಳಿಯ ರೇಖೆ ಕಣ್ಣೊಳ್ ತೋಱಲ್ ||
ಬಳಸಿರೆ ಲೋಚನಯುಗಳಂ |
ಬಳೆಗಣ್ಣಾದಂದು ಶುಭದವೊಂದಱೊಳಶುಭಂ || ೩೬ ||

ನಯನಂಗಳ್ ತೊಳಗುವ ಬೆ |
ಳ್ಳಿಯ ಕಣ್ಣಂ ಪೋಲೆ ಮಲ್ಲಿಕಾಕ್ಷಂ ಶುಭಮಂ ||
ನಯನಕ್ಕೆ ಕರಿಯ ಬಳೆಗಳ್ |
ನಿಯತಂ [1]ನಿಲೆ ವಾಜಿ ಕೃಷ್ಣಮಾದೊಡೆ ಶುಭದಂ || ೩೭ ||

ಕಾಗೆ [2]ಶಿವೆ(ಲೆ) ಕಟಿಸ್ತ್ರಿ ತೋಳಂ |
ಗೂಗೆ ಕಪೋತಂ ಸುಭಸ್ಮಧೂಮಚ್ಛವಿಯಂ ||
ತಾಗಿರೆ ಹಯವರ್ಣಮಿವಂ |
ಬೇಗಂ ವರ್ಜಿಸುವುದಶುಭವರ್ಣಾದಿಗಳಂ || ೩೮ ||

ಕರಿಯಶ್ವಸಂಕುಲಂಗಳೊ |
ಳರುಣಂ ಸಿತರೇಖೆ ತುರಗವಂಶಾಂತದೊಳಾ ||
ಗಿರೆ [3]ತತ್ಕ್ಷಣದಿಂದಂ ಪರಿ |
ಹರಿಸುವುದದನಾಳಲಾಗದಭಿನವಚಂದ್ರಾ || ೩೯ ||

ಶ್ವೇತಂ ತನು ತಲೆ ಕರಿದ |
ಪ್ಪಾತುರಗಂ ಕಾಕ (ಶ್ಯೇನ) ಶಿರನಪೂಜ್ಯಂ ತಾಜ್ಯಂ ||
[4]ಖ್ಯಾತಿಯೊಳೆ ತ್ಯಜಿಸಿ ಕಳೆವುದು |
ಶ್ವೇತಂ ಶಿರವಂಗಂ ಕರಿವು ಪರಿಹಾರ್ಯಂಗಳ್ || ೪೦ ||

ಕಾಗೆಯ ಮುಖದಂತಿರೆ ಕರಿ |
ದಾಗಿ ಬಹಿರ್ಮುಖ[5]ನ ಮುಖದವೋಲ್ ಕೆಂಪೆಸೆಯ ||
ಲ್ಕಾಗಳೆ ಪತಿಗೃಹಮಂ |
ಬೇಗದೆ ಮಾಱ್ಕುಂ [6]ಸಿರಿಯಂ ಬಹುವರ್ಣಂಗಳ್ || ೪೧ ||

ಖುರ ಮೇಢ್ರ ಮುಷ್ಕವಾಲಧಿ |
ಶಿರದೊಳೆ ಕರಿದಾಗಿ ತೋರ್ಪೊಡಂತದು ಕಷ್ಟಂ ||
ತುರಗಕ್ಕೆ ಪೇಳ್ದ ಯೆಡೆಯೊಳ |
ಗಿರೆ ಬೆಳ್ಪಂ ಶುಭದಮೆಂದನಭಿನವಚಂದ್ರಂ || ೪೨ ||

1 ....ಸೆತ್ವವಾಜಿ ಕೃಷ್ಣ ತಾರಕನಶುಭಂ. 2 ಶಿವ. 3 ಪಾಪ ಲಕ್ಷಣಂ. 4 ಶ್ವೇತಶಿರನನ್ಯವರ್ಣ| ವ್ರಾತಾಂಗಮುಮಾದೊಡಂತೆ ಪರಿ. 5 ಮುಖಮುವು ತದಾನನಮುಂ ನಿ| ರ್ವೇಗಂ ಪೂಱ್ಕುಂ ನಿಜಪತಿ| ಗಾಗಳು ಮುತ್ಸಾಹ ಹೇತು ಬಹುವರ್ಣಂಗಳ್. 6 ಸಮಿಪಂ.

ಕಂ|| ತುರಗದ ಕಾಲ್ಗಳೊಳಡ್ಡಂ |
ತರದಿಂ ಕರಿದಪ್ಪ ರೇಖೆಗಳ್ ಚಿತ್ರಿಸಿದಂ ||
ತಿರೆ ಪಾಪಲಕ್ಷಣಂ ಪರಿ |
ಹರಿಪುದು ಮಾರ್ಜಾಲಚರಣ ನಿರ್ಘನ ಕರಣಂ || ೪೩ ||

ಪಾದದ್ವಂದ್ವದೊಳಂತಾ |
ಪಾದಚತುಷ್ಟಯದೊಳಾದ ಬೆಳ್ಪಿಂದೆಂ ಸಂ ||
ಪಾದಿಸುಗುವಸಮಪಾದದೊ |
ಳಾದೊಡೆ ಬೆಳ್ಪೊಳ್ಪನಱಗುನಭಿನವಚಂದ್ರಾ || ೪೪ ||

ಬಾಲಂ ಕವಲ್ತು ಮಿಳಿರ್ವುರಿ |
ಮಾಲೆ ಯೊ(ಲಿವೊ)ಳಿರೆ ಕೇಸರಂಗಳುಂ ಕಡುಗರ್ಪಂ ||
ಪಾಲಿಸಿದೊಡಂ ಕವಿಲ್ತೊಡ |
ಮಾಲಯಕಾ ದುಷ್ಟವಾಜಿ ಭಯಮಂ ಮಾಳ್ಕುಂ || ೪೫ ||

ಬಾಲದ [1]ರುಚಿ ತನುರುಚಿಯುಂ |
ಪೋಲದೆ ಬೇಱೊಂದು ಬಣ್ಣವಾದೊಡೆ ತನು ಶಾ ||
ದೂರ್ಲ ತನುರುಚಿಯುಮಾಗೆ ನಿ |
ಜಾಲಯದಿಂದಂ ಕಳೆದುಬಿಡುವುದತಿವೇಗದೊಳಂ || ೪೬ ||

ಹರಿಣರುಚಿಯಂತೆ ಮೆಯ್ ಕಡು |
ಕರಿದೊಳ್ತೊಡೆಗಳ್ ಬಸಿಱ್ ಕೊರಲ್ ಕ್ರೋಡಂ ಪೇ ||
ಱರವಿನಿತುಮವಿನ ಬಣ್ಣದೊ |
ಳಿರೆಽಕಲಂ ? ಮಶ್ವಜಾತಿಯತಿಕಷ್ಟತರಂ || ೪೭ ||

ಮಂಗಳಕಾರ್ಯಕ್ಕಂ ಸಮ |
ರಾಂಗಣಕಂ ವಾಜಿವಾಹನಂಗಳ್ ಶುಭವ ||
ರ್ಣಂಗಳ್ಪೂಜ್ಯಂದುರ್ವ |
ರ್ಣಂಗಳಪೂಜ್ಯಂಗಳುಭಯಕಾರ್ಯಕ್ಕೆಂದುಂ || ೪೮ ||

ಧವಳಾಂಗನಪ್ಪ ತುರಗಂ |
ಕುವಳಯಬಾಂಧವನ ವಾಹನಂ ಕರ್ಕಶಮಾ ||
ಹವದೊಳ್ ನರನೇಱಲ್ಕತಿ |
ಜವದಿಂ ಜಯಮಾಗೆ [2]ಮಾಳ್ಕುಮಾ ಪರನೃಪರಂ || ೪೯ ||

ಅರಿಯಂ ಸಂಕ್ಷೇಪದೊಳಾಂ |
ತರಿಯಂ [3]ಗೆಲಿಸುಗುಮದಶ್ವಸಾಧನಪತಿ[4]ಯುಂ ||
ಭರದಿನದನೇಱೆ ಲಕ್ಷಣ |
ನಿರತಂ ಸುರಪತಿಯ ವಾಹನಂ ಕೇವಳಮೋ || ೫೦ ||

1 ತುದಿ. 2 ತೂಳ್ದುಗುಂಪರ. 3 ತೇಲಿಸುಗು. 4 ಸಂ । ಗರದೊಳದನೇಱೆ.

# ತೃತೀಯಾಧ್ಯಾಯಂ

## ಪು ಷ್ಪ ಪುಂ ಡ್ರಾ ದ್ಯ ಧ್ಯಾ ಯಂ

ಕಂ|| ವಾಜಿಗಳ ಮೇಢ್ರಪುಷ್ಪ ವಿ |
ರಾಜಿತಮಂ [1]ಗಂಧಹೇಷಿತಸ್ವನಗಳ ವಿ ||
ಭ್ರಾಜಿತಮಂ ಪೋಷಕಜನ |
ಪೂಜಿತಮಂ ವ್ಯಕ್ತವಾಗಲಭಿವರ್ಣಿಸುವೆಂ || ೧ ||

ಬೆಳ್ಪಿಲ್ಲದ ಬಣ್ಣಂಗಳೊ |
ಳೊಳ್ಪಳವಟ್ಟಿರೆ [2]ಯುಪಾನದಿಂ ಸ್ರುವ(ಸ್ತುವೆ)ವರೆಗಂ ||
ನೀಳ್ಪುವಡೆದೆಸೆದು ತೋಱಿ[3]ಯು |
ಮೊಳ್ಪಂ ಶುಭಪ್ರೋಥಜಾತಮೆನೆ ಪೆಸರ್ವಡೆಗುಂ || ೨ ||

ಆನನಮಲ್ಲದೆ ಧವಳ |
ಸ್ಥಾನಂ ತಾನಾದೊಡಕ್ಕುಮವಕಂಠತೆಯುಂ ||
ಸ್ಥಾನದೊಳಂಗದೆ ವಿರ(ಮು)ಳ |
ಸ್ಥಾನಂ [4]ಪುಟ್ಟಿದೊಡೆ ಲಲಿತ ಪುಂಡ್ರಕನಾಮಂ || ೩ ||

ಖರದಂಡಾಂಕುಶ ಝಷ ಚಾ |
ಮರ ದರ್ಪಣ ಕಲಶಶಂಖ ಭೃಂಗಾರು ನಿಶಾ ||
ಕರ ಶಕ್ತಿ ಖಟ್ಗ ಮುಸಲೋ |
ತ್ಕರಮಂ ವಾಜಿಗಳ ಪುಂಡ್ರಮದನುಕರಿಸೆ ಶುಭಂ || ೪ ||

ಚಾಪಂ ಶ್ರೀವೃಕ್ಷಂ ಸ್ರುವೆ |
ಯೂಪಂ ಸ್ವಸ್ತಿಕ ಮುದಗ್ರವಜ್ರಮುಮೆಂದೀ ||
ರೂಪಕದ ಪುಂಡ್ರಲಕ್ಷ್ಮ ನಿ |
ರೂಪಕಮಾವಾಜಿ ಪೂಜ್ಯನಭಿನವಚಂದ್ರಾ || ೫ ||

ನೊಸಲೊಳ್ ಚತುರಸ್ರಂ ಬೆ |
ಳ್ಪೆಸೆದಿರೆ ಶುಭಮುರಳಿಯೊಲೆಯ ತೆಱದಿಂದಂ ರಂ ||
ಜಿಸೆ ವರಲಲಾಟದೊಳ್ ಬೆ |
ಳ್ಪೆಸೆದಿರೆ ಸರ್ವಾರ್ಥಸಿದ್ಧಿ ಸೌಭಾಗ್ಯಕರಂ || ೬ ||

ಕಟಿ ಶಂಖಕರ್ಣ ಮಸ್ತಕ |
ನಿಟಿಲತಟೀ ಪುಟದೊಳ್ ಶಶಾಂಕದ್ಯುತಿಯಿಂ ||
ಘಟಯಿಸಿದ ಪುಂಡ್ರಮೊಳ್ಪಂ |
ಘಟಯಿಸುಗುಂ ಪಡೆವರಾರ್ ಸಿತಪ್ರಾವೃತಮಂ || ೭ ||

(೧. ಪುಂಡ್ರಲಕ್ಷಣಂ)

ಕಂ|| ಆನನ ಶಿರಃಪ್ರದೇಶದೊ |
ಳೀನುಂ ಬೆಳ್ಪಿಲ್ಲದಿರ್ದು ಘೋಟಾನನ ಸು ||
ಸ್ಥಾನದೊಳೆ ಬೆಳ್ಪು ಪುಟ್ಟಿದೊ |
ಡೂನೈಸದೆಯಾಳಲಾಗದಭಿನವಚಂದ್ರಾ || ೮ ||

ಶಿರಿ ಮುರಿ(ರ)ಕನಾಗಿ ಸೈತಾ |
ಗಿರದುಱಗಂಬೋಗಿ ಬಿಟ್ಟಿ ಬಾಗಿ ಲಲಾಟಾಂ ||
ತರದೊಳೆಡೆವಱಿದು ಪುಂಡ್ರಮ |
ದಿರಲಾಗಳೆ ಹಾನಿಯಕ್ಕುಮಭಿನವಚಂದ್ರಾ || ೯ ||

*ಸುತರಂ ಪಡೆಗುಂ ಪುಂಡ್ರಂ |
ಸಂತಪುಷ್ಪದ್ಯುತಿಯೆ ಪಲವುಮೊಗೆದೊಡಂ ಕೇಳ್ ||
ಸಿತಮೊಂದು ಕೋಶದೊಳ್ ಪತಿ |
ಗತಿಸೌಖ್ಯಮನಿತ್ತು ಭಾಗ್ಯವಂತನೆನಿಕ್ಕುಂ || ೧೦ ||

(೨. ಪುಷ್ಪಲಕ್ಷಣಂ)

ಸೇನಾಪತಿತ್ವದ ಮಹಿ |
ಮಾನಂ ಪತಿಗಕ್ಕುಮಶ್ವ ಸಮಿತಿಯ [1]ನಾಭೀ ||
ಸ್ಥಾನದೊಳಂ ಪುಷ್ಪಂಗಳ |
ನೂನಂ ಬೆಳಗುವೊಡೆ ಕುಂದಕುಸುಮದ ತೆಱದಿಂ || ೧೧ ||

ತುರಗದ ಮೆಯ್ಯೊಳ್ ಪುಷ್ಪಂ |
ಕರಿದಾದಂದಶುಭಮಾವ ಬಣ್ಣದೊಳಂ ಪಾಂ ||
ಡರಮಾದೊಡೆ ಶುಭಮದನಾ |
ದರಿಪುದು ಪರಿಹರಿಪುದಸಿತಪುಷ್ಪಾದಿಗಳಂ || ೧೨ ||

ಗ್ರೀವಾ ಮನ್ಯುವಹಸ್ಥಾ |
ನಾವಿಳಸಿತಪುಷ್ಪ ಸಮಿತಿಶ(ಸ)ರಸಮಿತಿಗಳಿಂ ||
ನೋವಕ್ಕೆಂತು(ದು)ಂ ನಿಜಪತಿ |
ಗಃ ವಾಜಿಯನೇಱಲಾಗದುಗ್ರಾಹವದೊಳ್ || ೧೩ ||

ಕ್ಷಸಪ್ತಾಹಂಗಳೊಳಂ ಮಿಗೆ |
ಸಪ್ತಮ ಪಕ್ಷದೊಳಮಿಾಗು ಮೆಂತಾದೊಡೆಯುಂ ||
ಸಪ್ತಮಮಾಸದೊಳೆನಸುಂ |
ಸಪ್ತಾಬ್ದದೊಳೆಂತುಮಿಾಗು ಮಧಿಪಗೆ ಫಲಮಂ | || ೧೪ ||

---

1 ಯನಿಂಬೆಸ್ಥಾನಕದೊಳ್.

* ಸುತನುಂ ಪಡೆಗುಂ (ಪಟ್ಟ) ಪುಷ್ಯ। ಪ್ರತತಿಗಳಾದಂದು ಕೋಶದೊಳ್ ತಿಳಪುಷ್ಪಂ ||
ಗತಮಾಗಿನಿಂದ ತುರಗಂ (ದ)। ಪತಿಗೆ (ಱಕೆ) ಕರಂ ಪಿರಿದುಮೊಂದು ಸೌಭಾಗ್ಯಕರಂ || ೭೪ ||

(೩. ಗಂಧಲಕ್ಷಣಂ)

ಕಂ|| ನೇತ್ರಂ ವದನಂ ಕರ್ಣಂ |
ಗಾತ್ರಂ ಘ್ರಾಣಂ ಗುದಂ ಪುರೀಷಂ ಸ್ವೇದಂ ||
ಮೂತ್ರಮಿವಱಿಂದೆ ಗಂಧಂ |
ಚಿತ್ರವಿಧಂ ಪುಟ್ಟುಗುಂ ಪರೀಕ್ಷಿ[1]ಕೆ ವಿಬುಧರ್ || ೧೫ ||

ಇಕ್ಷುರಸಂ ಪೊಸತುಪ್ಪಂ |
ಗೋಕ್ಷೀರಂ ಶಾಲಿತಂಡುಲಂ ಮಧುಮಧುರಂ ||
ದ್ರಾಕ್ಷಾಸಮಾನ ಗಂಧದ |
ಲಕ್ಷಣಯುಕ್ತಂಗಳನಿತುಮುತ್ತಮಗಂಧಂ || ೧೬ ||

ಅಂಬುರುಹದ ಕಣಿಗಿಲೆಯ ಕ |
ದಂಬದ ಕುವಲಯದ ಜಾತಿಯಲರ್ಗಳ ತಣ್ಗಂ ||
ಪೆಂಬಿನಿತಱ ಗಂಧಮನವ |
ಲಂಬಿಸಿದೊಡೆ ಹರಿ ಜಯಾವಲಂ[2]ಬಿಯುದಕ್ಕುಂ || ೧೭ ||

ಬಾಳಂ ಮಲಯರುಹಂ ಕ |
ಬ್ಬಾರ್ಳಂ ಕೋಷ್ಠಂ ಖಜೋರಮೇಲೆ ಲವಂಗಂ ||
ಕಾಳಾಗುರುಗಂಧಂಗ |
ಳ್ಗಾಳಯಮಾದಂದು ವಾಹಮುತ್ಸಾಹಕರಂ || ೧೮ ||

ಆಸವದಾಭ್ರದ ಫಣಿಯು ನಿ |
ವಾಸದ ನೆಲ್ಲರಳ ಬೆಲ್ಲವತ್ತ್ರದರಿಷ್ಟಾ ||
ಭಾಸದ ಮದ್ಯದ ಪಲಸಿನ |
ವಾಸನೆ ನಿಶ್ವಾಸಮೆನೆ ಹಯಂಗಳ್ ಶುಭದಂ || ೧೯ ||

ಅವಗಾಹದೊಳಂ ಮೆಯ್ಯ |
ಚರ್ಮವೆಡೆಯೊಳಂ ನೋಡೆ(ಡಿ) [3]ನಾಡೆ ಮೆಯ್ಯಿಂದಂ ಪೊ ||
ಣ್ಮುವ ಗಂಧಂ ಪದ್ಮದಳ |
[4]ದವನಮುಮಂ ಪೋಲೆ ಹಯಮದುತ್ತಮಮಕ್ಕುಂ || ೨೦ ||

ಸೂಕರದ ಗಜದ ಶರಭಾ |
ನೀಕದ ಪೋಂತಿನ ವಿಗಂಧ ಬಂಧುರ ವಿಣ್ಮೂ ||
ತ್ರಾಕಾರ ಗಂಧದ ಶ್ವಾ |
ನೀಕಂ ಭಯಹಾನಿಶೋಕರುಙ್ಮರಣಕರಂ || ೨೧ ||

1 ಸುಗೆ ಬುಧರ್. 2 ಬನಮಕ್ಕುಂ. 3 ನಾದಂ ನೆಲದೆಂದಂ ಪೊ || ಣ್ಮುವ ಗಂಧದಂತೆ ಕಣ್ಣಂ | ಶ್ರುವಾಜಿಯಿಂ ಪೊಣ್ಮೆ ಚಕ್ರವರ್ತಿಗೆ ಯೋಗ್ಯಂ || 4 ದವಕಾರಂ.

ಕಂ|| ಬಿಸುನೆತ್ತರ ವಿಾಂಬೊಲಸಿನ |
ವಂಸಕದ ಸುಂಡಿಲಿಯ ಕಟಿಾಯ ಗೋಚರ್ಮದ ಲೋ ||
ಯಿಸರದ ಮತ್ತ್ರಿದಾಳದ |
ಬಸೆಯಂದದ ಗಂಧನೆಸೆವೊಡಶುಭಂ ತುರಗಂ || ೨೨ ||

ತುರಗಕ್ಕೆ ಸುಸ್ವರಂ ದು |
ಸ್ಸ್ವರಮೆಂಬಿವನಱಿಯೆ ಪೇೞ್ವೆ[1] ನಾವಾಜಿಯನು ||
ದ್ಧರಿಕು ಹಯಪ್ರಾಣಂ ರೋ |
ಮರಾಜಿ ವಿಡಿದಡರೆ ಸಲ್ಗುಮುರದಿಂ ಕೊರಲಿಂ || ೨೩ ||

(೪. ಧ್ವನಿಲಕ್ಷಣಂ)

ಅದಱುಣ್ಮಿದ ನಯದಿಂದಂ |
ಹೃದಯಂ ವಕ್ಷಂ ಕೊರಲ್ ಶಿರಂ [2]ನಿರ್ಭರದಿಂ ||
ಬಿದಿರ್ದೊಡೆ ಕೇಸರ ಪೊಱಮಡೆ |
ಕುದಿರೆಗೆ [3]ಹೇಷಿತಮುಮಾಯ್ತು ಮುನಿ[4]ಭಾಷಿತದಿಂ || ೨೪ ||

ಘನಮಪ್ಪುದು ಗಂಭೀರ |
ಸ್ವನಮಪ್ಪುದು ತೀರತಪ್ಪುದುತ್ಸಾಹೊನ್ನೀ ||
ಲನಮಪ್ಪುದು ಹೇಷಿತಮದು |
ಧನಕನಕಸಮೃದ್ಧಿ ಮಾಡಲಾರ್ಕುಂ ಜಯಮಂ || ೨೫ ||

ಮದಗಜದ ಮುಗಿಲ ಶಾರ್ದೂ |
ಲದ ಕೊಂಚೆಯ[5] ರವದ ಪಱೆಯ ಶಂಖದ ಪುಣ್ಯಾ ||
ಹದ ವೃಷಭದಿಭವಿರೋಧಿಯ |
ವಿದಿತ ಸ್ವರ ಸದೃಶ ನಾದಮಾದುದು ಶುಭದಂ || ೨೬ ||

ಸೂಕರದ ಖರದ ಕರಭಾ |
ನೀಕದ ಬಳ್ಳುವಿನ ನರಿಯ ಚಿಕ್ಕಿನ ಕಾಕೋ ||
ಲೂಕಂಗಳ ಶುನಕ ಸ್ವರ |
ದಾಕಾರದ ಸರದ ವಾಜಿಕರಮಶುಭಕರಂ || ೨೭ ||

ತಸುಗತಿ ಶಿರಸೋದ್ಗತ ತ |
ಜ್ಜನಿತ ತನುಚ್ಛಿನ್ನ ಘೋರಕಠೋರ ||
ಸ್ವನಮಿವು ಕರಮಶುಭ |
ಸ್ವನಂ ಶುಭಸಹಿತಮಿವು ಶುಭದಹಿತಂ ಶುಭದಂ || ೨೮ ||

---

1 ನಾನಱಿದನಿತಂ॥ ಮುರಿವೊಡೆ ಮೊದಲೊಳ್ ರೋ। ಮರಾಜಿಗೆಳರುತರಮಾಗಿರಲ್ ಶುಭದಮಭಿನವ ಚಂದ್ರಾ॥ 2 ಘುರ್ಘುರದಿಂ. 3 ಪೆಂಮಿತ. 4 ಭಾವಿತ. 5 ಯಂಚೆಯ.

ಕಂ|| ಪಸಿದಿರ್ದುದು ನೀರಡಸಿದು |
ದು ಸುಖಾತುರನೇಱುವಡೆದುದಧ್ವಾನದೊಳಂ ||
ಬಸವಳಿವುದು ಬಾಳಂ ಕ್ಷೀ |
ಣಿಸಿದ್ದುದು ವೃದ್ಧಂ ಸಮಾನಲಕ್ಷಣರಹಿತಂ || ೨೯ |

(೫. ಸತ್ವಗುಣಂ)1

ಶ್ರೇಷ್ಠಂ ಮಧ್ಯಮನಂತೆ ಕ |
ನಿಷ್ಠಂ ಸತ್ವಂಗಳಕ್ಕುಮಲ್ಲಿಯೆ ಮೇಣಾ ||
ಶ್ರೇಷ್ಠಂ ಮಧ್ಯಮಮಾಱು ಕ |
ನಿಷ್ಠಂ ಮೂಱುಂದು ಷೋಡಶಂ ಸತ್ವಗುಣಂ || ೩೦ |

ಭೀತಮನಂ ಚಪಲಂ ಕಾ |
ಮಾತುರನತ್ಯಶನಕಾಂಕ್ಷಿತಂ ಖಗಸತ್ವಂ ||
ಭೀತಂ ಕ್ಷುಧಾರ್ದಿತಂ ತೃ |
ಷ್ಣಾತುರನತಿದೈನ್ಯರೂಪಿ ಪಶುಸತ್ವ ಹಯಂ || ೩೧ |

ಭೀರು ಚಲಪ್ರಕೃತಿ ಜಲಾ |
ಹಾರಂ ಪ್ರಿಯವಾದಿ 2ಮರ್ತ್ಯಸತ್ವಂ ನಿದ್ರಾ ||
ಪೂರಿತ ನಯನಾಲಸ್ಯಂ |
ಭೂರಿಧ್ಯಾನಸ್ಥನಾಗೆ ಭೈರವಸತ್ವಂ* || ೩೨

(೬. ಗತಿಲಕ್ಷಣಂ)

ಗತಿಲಕ್ಷಣವೆಂಬುದು ಕರ |
ಮತಿಶಯಮಮದಱೊಳ್ ಶುಭಾಶುಭಂಗಳಾನತ ||
ಗತಿಯಿಂದಮಕ್ಕು ಮದಱಾ |
ಕೃತಿಯುನತಿವ್ಯಕ್ತಮಾಗಲಭಿವರ್ಣಿಸುವೆಂ || ೩೩

ಬೆರಸದ ಖುರಮೊಂದಱೊಳೋ |
ಸರಿಸದ ಕಾಲಳಿದ ಬೆನ್ನುಡಂಗಿದ ಜಘನಂ ||
ತರದೊಳುಡುಗಿರ್ದ 3ಬಾಲಂ |
ಕೊರಲುನ್ನತವಕ್ಷಮೆಸೆವ ಲಯಗತಿ ಶುಭದಂ || ೩೪

ಆನೆ ಕರಭಂ ನವಿಲ್ ಪುಲಿ |
ಧೇನು ವೃಷಂ ಹಂಸಿ ಚಕ್ರವಾಕಂ ಸಿಂಹಂ ||
ವಾನರಮೆಂಬಿನಿತಱ ಗ |
ತ್ಯಾನೂನ ತುರಗದ ಗತಿಯೊಳಂತತಿ ಶುಭದಂ || ೩೫

1 ಗತಿ ಲಕ್ಷಣಂ—ಎಂದು ಒಂದು ಪ್ರತಿಯಲ್ಲಿದೆ. 2 ಮತ್ಸ್ಯ, ವತ್ಸ್ಯ. 3 ಬಾಲದ.

* ಇಲ್ಲಿಗೆ ಪದ್ಯ ಸಂಖ್ಯೆ ೯೬ ಎಂದಿದ್ದು, ಮುಂದೆ ೧ ರಿಂದ ಶ್ಲೋಕ ಸಂಖ್ಯೆ ಗುರ್ತಿಸಲ್ಪಟ್ಟಿದೆ.

ಕಂ|| ಕೆತ್ತುವೊಡಂ ಮುಖವುಂ ಕರ |
ಮೆತ್ತುವೊಡಂ ಬಲಿದು ನಲಿದು ಬಿಡದೆಡಹುತ್ತುಂ ||
ಕುತ್ತುವಿಡುವೊಡವಾಗತಿ |
ವಿತ್ತಹರಂ ಭ್ರಷ್ಟವಂಗನತಿಕರ ಕಷ್ಟಂ || ೩೬ ||

ಪದಿನಾಱುಮಾತ್ರೆ ಯೆಯ್ದುವ |
ಪದದೊಳ್ ಪರಿದುಂದೆ ನಶ್ವತಾವದಿಯುಂ? ಮು ||
ತ್ತದನಂತೆ ಮಗುಳ್ದು ಮತಿಮೆ |
ನದೆತ್ಯುತ್ತಮ ಜವದ ತುರಗ ಮಭಿನವಚಂದ್ರಾ || ೩೭ ||

ಇಪ್ಪತ್ತುನಾಲ್ಕು ಮಾತ್ರೆಗೆ |
ಬರ್ಪುದು ಮಧ್ಯಮಜವಂ ತದಷ್ಟಾಧಿಕದಿಂ ||
ಬರ್ಪುದು ಕನಿಷ್ಠ ಜವಮೆಂ |
[1]ಬರ್ ಪೂರ್ವಾಚಾರ್ಯರ ನುಡಿಗಳ್ ತಪ್ಪುಗುಮೇ || ೩೮ ||

ಕರದಿಂ ಪ್ರದಕ್ಷಿಣಂ ಬಲ |
ವರಿಕುಂ ಮೊಲಕಾಲನಲ್ಲದಂದು ಸಮಾನಾ ||
ಕ್ಷರಮೊಂದಂ ಮನದಿಂದು |
ಚ್ಚರಿಸಿದೊಡದು ಮಾತ್ರೆಯೆಂಬ ಪೆಸರಂ ಪಡೆಗುಂ || ೩೯ ||

ಸತ್ವಯುತಂ ಸ್ನಿಗ್ಧಾಗುರು |
ಹತ್ವಂ ಗ(ದಿ)ತಿ ಶಾಲಿ ಬುದ್ಧಿವಂತಂ ಶಬ್ದಾಂ ||
ಕ ತ್ವರಿತನ ನಿಗ್ರಹ ನತಿ |
ಸತ್ವ ನರತ್ರಾಸಿಕಂ ಹಯಂ ಭದ್ರಾಕ್ಷಂ || ೪೦ ||

ರೋಮಾಜಿನ ಕುಷ್ಠಿಕೆಗಳ್ |
ಕೋಮಲವತಿರಭಸ[ವೇಗಮಾನ] ವಿಲಾಸೋ ||
ದ್ದಾಮಂ ದಂಡನಿರಕ್ಷಣ |
ರಾಮಸಸಂ ವಿಷಮಮಾನ ನಯನೋತ್ಥಾನಂ || ೪೧ ||

ಪ್ರಾಜನ ಶಬ್ದಾಕಾಶನ |
ಯೋಜನೆಯೊಳ್ ಸೂಕ್ಷ್ಮವೇದಿ ಭೀತಂ ತೀವ್ರಂ ||
ತೇಜಸ್ವಿ ಹರಿಣ ಜಂಘಾ |
ರಾಜಿತಮೆನಿಸುವ ತುರಂಗಮಂ ತೀಕ್ಷ್ಣ ಹಯಂ || ೪೨ ||

1 ಮಂ। ಬೆಪ್ಪಾಧ್ಯಾಚಾರ್ಯನುದಿರ ಮಪ್ಪುಗುಮೇ.

ಕಂ|| ಮೃಗ ಜಂಘೆ ಮೃಗ ವಿಲೋಚನ |
ಮೃಗಸೌಷ್ಠವ ಮೃಗಸಮಾನಲಂಘನದಿಂದ ||
ದ್ರಿಗಳ ನಡೆಪಾಗಿ ಜಂಘೆಯ |
ಮಿಗೆ ತೀಕ್ಷ್ಣಂ ವಿಷಮುರಸಮೆನಿಪ್ಪುದು ತುರಗಂ || ೪೩ |

ಸ್ಥೂಲಾಜಿನ ಕುಷ್ಠಿಕೆ ರೋ |
ಮಾಳಿಗಳಂ ಸ್ಥೂಲದೇಹನತ್ರಾಣ ಜಡಂ ||
ವ್ಯಾಳಗಮನಂ ವಿನಿಗ್ರಹ |
ವಾಳಜನೆನೆ ವಾಜಿ ಮನ್ನನಭಿನವಚಂದ್ರಾ || || ೪೪ |

(೭. ಛಾಯಾಲಕ್ಷಣಂ)

ಲಕ್ಷಣ ಮೆನಿತನಿತಱೊಳುಪ |
ಲಕ್ಷಿಸಿ ವಿವಿಧಪ್ರಕಾರದಿಂದಂ ಛಾಯಾ ||
ಲಕ್ಷಣಮನಱಿದು ನೋಡಿಯು |
ಪೇಕ್ಷಿಸುವುದು ಪಂಚವಿಧದಿನಭಿನವಚಂದ್ರಾ || ೪೫ ||

ತೋಯಂ [1]ವಸುಂಧರಾಗ್ನಿ |
ಚ್ಛಾಯಾತ್ರಿತಯಂಗಳುತ್ತಮಂ ಪವನನಭ ||
ಚ್ಛಾಯೆಗಳಿಂದುಂ ವಾಜಿಗ |
ನಾಯುಷ್ಯಕರಂ[ಕರಂ] ಮಹಾದೋಷಕರಂ || ೪೬ ||

ನಾನಾವರ್ಣದೊಳವಿಚ್ಛಿ |
ನ್ನಾನನದಸ್ನಿಗ್ಧ ಬಹುಳರುಚಿ ಭಾವಿಪೊಡಿಂ ||
ತಾನಧಿಕವಾಗಿ ದೇಹ |
ಸ್ಥಾನಕದೊಳ್ ನೆಗಟ್ಟೆ ಧಾರಿಣೀಚ್ಛಾಯ ಹಯಂ || ೪೭ ||

[2]ತಿಳಿಗೊಳನ ಬಿಳಿಯ ತಾವರೆ |
ಯಲರ್ಗಳ ಗೊಂದಣಿ(ಳಿ)ಪ ಕಾರ್ಮುಗಿಲ್ಗಳ ರುಚಿಯಂ ||
ತಳೆದು ಥಳಥಳಿಸಿ ತೊಳೆತೊಳ |
ತೊಳಗುತ್ತಿರ್ಪಂದು ಧಾರಿಣೀಚ್ಛಾಯಿ ಹಯಂ || ೪೮ ||

ಪವಳದ ಕಾಂಚನದುದಯಿಪ |
ರವಿಬಿಂಬದ ಪದ್ಮರಾಗದರನೇಱಾಲ ಬ ||
ಣ್ಣವ ನಿಱು(ಲಿ)ಸಿ ದೀಪ್ತ ಮಂದ |
ಚ್ಛವಿ ಮಿಱುಮಿಱುಮಿಱುಗೆ ಪಾವಕಚ್ಛಾಯ ಹಯಂ || ೪೯ ||

---

1 ಯ ವಿಷದ ಸೌಂರಾಗ್ನಿ. 2 ೧೫–೧೬ ಈ ಎರಡರಲ್ಲೂ ಧಾರಣೀಚ್ಛಾಯೆಯ ಹಯಲಕ್ಷಣ ಹೇಳಿದೆ, ಉಳಿದ ಛಾಯೆಗಳ ಲಕ್ಷಣವು ಒಂದೊಂದು ಕಂದದಲ್ಲಿ ಮಾತ್ರ ಹೇಳಿದೆ.

ಕಂ|| ರೋಮಮೊಡೆಗು ಕರಂ ಕಡು |
ರೋಮಂಗಕ್ಕುಂ ತಳಚ್ಛವಿಪ್ರಕಟನದಿಂ ||
ತಾಮಸ ಹರಿಸಮ ನೋಡುಗು |
ಮಾಮಾರುತರುಚಿ ಹಯಂಗಳೊಳ್ ಕರಮಶುಭಂ || ೫೦ ||

ಅವ್ಯಕ್ತ ಚಪಲ ತನುರೂ |
ಕ್ಷ ವ್ಯಾಪಕದಿಂ ಶರೀರದೊಳ್ ವಿಚ್ಛವಿಗಳ್ ||
ಸುವ್ಯಕ್ತಮಾಗಿ ತೋಱುವೊ |
ಡಾವ್ಯೋಮಚ್ಛಾಯೆ ಹರಿ ಕನಿಷ್ಠಮನಿಷ್ಟಂ || ೫೧ ||

ತುರಗನಿವಹಕ್ಕೆ ನೊಸಲೊಳ್ |
ನಿರುತಮಲಂಕರಿಸೆ ಮೂಱುಸುೞಿ ನೀಳದೊಳಾ ||
ಗಿರೆ ನಿಶ್ರೇಣಿಕ ಮೆಂಬುದು |
ಕರಮುಸುಖಂ ವಾಜಿ ಪೂಜ್ಯನಭಿನವಚಂದ್ರಾ || ೫೨ ||

ಸ್ಥಾನಂ ಭಾವಿಸೆ ಸುಪ್ತ |
ಸ್ಥಾನಂ [1]ವ್ಯಕ್ತಾವಸಾನಮೆಂಬೀ ನಾಲ್ಕುಂ ||
ಸ್ಥಾನದೊಳುಪಲಕ್ಷಿಸುಗುಮ |
ನೂನ ಶುಭಾಶುಭ ಫಲಪ್ರದಚ್ಛಾಯೆಗಳುಂ || ೫೩ ||

ಖರ ಕಿರಣಾದಿಗಳಂ(ಳಿಂ) ಜಲ |
ಧರ ಪಟಲಂ ಮುಚ್ಚುವಂತೆ ಲಕ್ಷಣನಿಚಯ ||
ಸ್ಫುರಣೆಗಳಂ ಪ್ರಚ್ಛಾದಿಸಿ |
ತುರಗಚ್ಛಾಯೆಗಳೆ ಬೆಳಗುಗುಂ ನಿಜಗುಣಮಂ || ೫೪ ||

ಇದು ಪುಂಡ್ರ ಪುಷ್ಪ ಗಂಧಾ |
ದ್ಯುದಾತ್ತ ಹೇಷಿತ ಗತಿಪ್ರಭಾವ ವರ್ಣಮನಿತ್ತುಂ ||
ಮುದನುಂ ಬುಧಸಮಿತಿಗೆ ಮಾ |
ೞ್ಪುದು ಚಂದ್ರನ ಮತದೆ ತತ್ತೃತೀಯಾಧ್ಯಾಯಂ || ೫೫ ||

ಇಂತು ತೃತೀಯಾಧ್ಯಾಯಂ.

1 ವೃತ್ತಾವಸಾನ, ವ್ಯಕ್ತಾಸಾನ.

# ಚತುರ್ಥಾಧ್ಯಾಯಂ

## ಆವರ್ತಾಧ್ಯಾಯಂ

(ಸುೞಿಗಳ ಭೇದಲಕ್ಷಣಂಗಳ್)

ಕಂ|| ಧ್ರುವಮನ್ಯಂ ಶುಭಮೆಂದ |
ಪ್ಪುವು ಸುೞಿಗಳ್ ನೂಱು ಭೇದದಿಂದಂ ತುರಗ ||
ಕ್ಕವಯವದಿಂದಂದೊಳವ |
ಪ್ಪುವುಮಷ್ಟವಿಧಂ ಸ್ಥಾನಕಮವರ್ಕೆ ನೂಱಾಱಕ್ಕುಂ || ೧ ||

ಪತ್ತಾವರ್ತಂ ಧ್ರುವಮೆ |
ಣ್ಬತ್ತಾಱಾವರ್ತಮಶುಭಮಾವರ್ತಂ ||
ಮತ್ತೇೞು ಶುಭಂ ನೂಱ |
ಪ್ಪತ್ತಾಱವು ರೋಮಜಮಜಸ್ರಂಗಳೆನಿಕ್ಕುಂ || ೨ ||

ಉರದೊಳ್ ಶಿರದೊಳ್ ರಂಧ್ರೋ |
ಪರಂಧ್ರದೊಳ್ ಸುೞಿಗಳಕ್ಕು ಮೆರಡೆರಡೊಂದೊಂ ||
ದೆರಡೆಡೆಯೊಳಮಂತಕ್ಕುಂ |
ತುರಗದ ನೊಸಲೊಳ್ ಪ್ರಪಾನ ಸಂಸ್ಥಾನಕದೊಳ್ || ೩ ||

ಧನಮಂ ನಾನಾವಿಧ ಭೋ |
ಜನಮಂ ನಿಜಪತಿಗೆ ಮಾಡುಗುಂ ಸ್ವಕ್ಕಿಣಿಯೊಳ್ ||
ಜನಿಯಿಸಿ ದಾವರ್ತದ ತುರ |
ಗನಿಕಾಯಂ ಪತಿಹಿತಂಗಳಭಿನಚಂದ್ರಾ || ೪ ||

ನೊಸಲೊಳ್ ಪ್ರದಕ್ಷಿಣಂ ರಂ |
ಜಿಸುವಾವರ್ತ ದ್ವಯಂಗಳುಳ್ಳೊಡೆ ತುರಗಂ ||
ವಿಸಸನದೊಳಹಿತರಂ ಮ |
ರ್ದಿಸುಗುಂ ನಿಜಪ[1]ತಿಗೆ ಜಯಮನನುಬಂಧಿಸುಗುಂ || ೫ ||

ನೊಸಲೊಳ್ ನಾಲ್ಕಾವರ್ತಂ |
ಪಸರಿಸಿ ಚತುರಸ್ರಮಾಗಿ ನಾಲ್ಕೆಡೆಯೊಳ್ ರಂ ||
ಜಿಸಿ ಸಮನಾಗಿರೆ ಲೋಕ |
ಪ್ರಸಿದ್ಧನಂ ಸುಜನಸುತನನಧಿಪತಿ ಪಡೆಗುಂ || ೬ ||

1 ತಿಗಂ.

ಕಂ|| ಸಂತೋಷಕರಂಗಳ್ ಎಂಗೆ |
ಶಾಂತದ ಸುೞಿಗಳ್ ಹಯಕ್ಕೆ ಹಸುಕಂಠಸ್ಥಾ ||
ನಾಂತರದಾವರ್ತಂ ರಿಪು |
ಸಂತತಿಯಂ ತವಿಸಿ ಪತಿಗೆ ಜಯಮಂ ಮಾೞ್ಕುಂ || ೭ ||

ಉರದೊಳ್ ನಾಲ್ಕಾವರ್ತಂ |
ಸುರವಕ್ಕವವೂರ್ಧ್ವರೋಮದಿಂದಂ ಸ್ಥಿತಾ ||
ಗಿರೆ ಜಯವಲ್ಲಿಯೆ ನಾಲ್ಕಾ |
ಗಿರೆ ನಾಲ್ಕುಂದೆಸೆಗೆ ಜಸಮನವು ಪಸರಿಸುಗುಂ || ೮ ||

ಅಂತಾ ನಾಲ್ಕಾವರ್ತದೆ |
ಮುಂತೆಸೆದಿರೆ ರೋ(ಲೋ)ಚಮಾನಮದಱಿಂ ಶ್ರೀ ವೃ ||
ಕ್ಷಂ ತುರಗದ ಪೆಸರದನಾ |
ಳ್ದಂ ತಾಳ್ದುಗುಮಖಿಲಲಕ್ಷ್ಮಿಯಂ ನಿಶ್ಚಯದಿಂ || ೯ ||

ಅಂಗವಿದೆಯೆಂಬ ಪೆಸರ ತು |
ರಂಗದ ಬಾಹುಗಳೊಳಾದ ಸುೞಿ[1]ಗಳನಿತ್ತುಂ ||
ಮಂಗಲವಸ್ತ್ರಾಭರಣಚ |
ಯಂಗಳನಧಿಪತಿಗೆ ಮಾೞ್ಕುಮಭಿನವಚಂದ್ರಾ || ೧೦ ||

ಉಪರಂಧ್ರಾವರ್ತಂಗಳೊ |
ಳುಪರಿಸ್ಥಿತಮಾಗಿ ತೋರ್ಪ ಸುೞಿ ಮೇಖಲೆಯಂ ||
ತುಪಲಕ್ಷಿಸಲದು ಮಾೞ್ಪುದು |
ವಿಪುಳಶ್ರೀಕರಣಮೆಂಬುದಭಿನವಚಂದ್ರಾ || ೧೧ ||

ಉರದೆಡೆಯೊಳಂ ಲಲಾಟಾಂ |
ತರದೊಳಮೊಂದೊಂದೆ ಸುೞಿಗಳಾದಂದು ಮನೋ ||
ಹರಕಾರ್ಯಸಿದ್ಧಿಯಕ್ಕುಂ |
ತುರಗಮನದನಾಳ್ವದೆಂದನಭಿನವಚಂದ್ರಾ || ೧೨ ||

ತುರಗಕ್ಕೆ ಶುಭಾವರ್ತೋ |
ತ್ಕರಮೆನೆ ಪತ್ತಾಱು ಪುಟ್ಟುಗುಂ ಪತ್ತುದಿಶಾಂ ||
ತರದೊಳ್ ಪತ್ತುಂ ಕ್ಷೇತ್ರಾಂ |
ತರದೊಳನುಕ್ರಮದೆ ಪೇೞ್ದನಭಿನವಚಂದ್ರಂ || ೧೩ ||

1 ಸುೞಿಗಳಕ್ಕುಂ.

ಕಂ|| ಮರಣಂ ಜನನಿಗೆ [1]ಹಯದು |
ತ್ತರೋಷ್ಠದೊಳ್ ಸುಳಿಗಳಾಗೆ ತಂದೆಗೆ ಮರಣಂ
ದೊರೆಕೊಳ್ಗುಮಾ ಪ್ರಮಾಣೋ |
ಪರಿಯೊಳ್ ದಕ್ಷಿಣದೊಳಾದೊಡಾವರ್ತಂಗಳ್ || ೧೪ ||

ವಾಮಪ್ರದೇಶದೊಳ್ ಭ್ರಾಂ |
ತೇ ಮರಣ ಮನ್ಯದೇಶದೊಳ್ ಪತಿಗಱವಂ ||
ಸ್ವಾಮಿಗೆ ಕುಲನಾಶನಮಂ |
ರೋಮರುಹಂ ಪ್ರೋಥದಲ್ಲಿಯಾದೊಡೆ ಮಾಳ್ಕುಂ || ೧೫ ||

ನಾಸಾಪುಟದೊಳ್ ವಿತ್ತವಿ |
ನಾಶನಮಂ ಕದಪಿನೆಡೆಗಳೊಳ್ ಪತಿಗಱವಂ ||
ನಾಸಾವಂಶದೊಳಂತಕ |
ವಾಸಮನಾ ಪತಿಗೆ ಮಾಳ್ಕುಮಾವರ್ತಂಗಳ್ ೧೬ ||

ಮೊಗದಲುದುಃಖಮನಿರ |
ದಾಗಿಸುಗುಂ ತುರಗದಶ್ರುಪಾತದ ಸುೞಿ ವೈ ||
ರಾಗಂ ಬಂಧುಪ್ರೀತಿ ವಿ |
ಯೋಗಂ ಭೂಜಾತರೋಮ[2]ರಾಜಿಯಿನಕ್ಕುಂ ೧೭ ||

ಹನುಮಧ್ಯದೊಳಾಕಕ್ಷಾ |
ಸನಮಸ್ತಕಸಂಧಿ ಕೂರ್ಚೆ ಕಟಿ ಸಂಕುಲದೊಳ್ ||
ಜನಿಯಿಸಿದಾವರ್ತಂ ಪತಿ |
ಗನವರತಂ ಹಾನಿಶೋಕಭಯಮಂ ಮಾಳ್ಕುಂ ೧೮ ||

ಕರ್ಣಂಗಳ ತುದಿಯೊಳ್ ಸುೞಿ |
ನಿರ್ಣೀತಂ ತೋಱಿದೆ ಪತಿಗೆ [3]ಮಂತ್ರಿಗಮಾರ ||
ಭ್ಯರ್ಣದೊಳಿರ್ಕುಂ ಮರಣಂ |
ಸ್ವರ್ಣದ ಕರ್ಬುನದ [4]ಮಂದಮಂ ಪುಗಿಸಿದೊಡಂ ೧೯ ||

ಉದಯಿಸೆ ಸುೞಿಗಳ್ ತುರಗದ |
ಬಿದು ಸಂಸ್ಥಾನಕದೊಳರ್ಥಹಾನಿಯನವು ಮಾ ||
ಡದೆ ಮಾಣವು ತದ್ಗಳಮ |
ಧ್ಯದ ಸುೞಿಗಳ್ ಕ್ಷುಧೆಯೊಳಧಿಪನಂ ಮಱುಗಿಸುಗುಂ ೨೦ ||

1 ಶಾಯದತ್ತ. 2 ರಾಜದಿನಕ್ಕುಂ. 3 ಮಂತ್ರಂಗಾರ. 4 ಮಂದಮಂಸಂಪುಗಿ.

ಕಂ|| ಹೃದಯದೊಳಂ ಕ್ರೋಡದೊಳಂ |
ಕುದಿರೆಗೆ ಸುೞಿಯಾಗೆ ಕೊಲ್ಗು(ಳ್ಗ)ಮಧಿಪತಿಯಂ ಧು ||
ರ್ಯದ ನಡುವಣ ಸುೞಿಗಳ್ ಕೊ |
ಲ್ಲದೆ ಮಾಣ್ಗುಮೆ ಪತಿಯನವನ ಸುತಸಂತತಿಯಂ || ೨೧ ||

ಆವುದಱಿಂ ಕುದಿರೆಗೆ ಕಕು |
ದಾವರ್ತಂ ತೋಱಿದಂದು ಮಹದೋಷಕರಂ ||
ಭಾವಿಪೊಡನ್ವಯಸಹಿತಂ |
ಸಾವಕ್ಕುಂ ಪತಿಗೆ ಪತಿಗೆ ನಿಶ್ಚಯದಿಂದಂ || ೨೨ ||

ಮಣಿಮೊದಲಾಗಿರೆ ವಾಹನ |
ಗಣಮಂ ಮನೆಯೊಳಗೆ ನಾಂಟಲಣಮಿಾಯದು ಧಾ ||
ರಿಣಿಯಂ ಪಾಲ(ಲಿ)ಕ್ಕುಂ ದಾ |
ರಿಣಿಪತಿಯಂ ಕೆಡಿಸಲಾರ್ಕುಮಾ ರೌದ್ರಹಯಂ || ೨೩ ||

ನೋಡಿದೊಡಿಳಾಧಿಪತಿಯಂ |
ನೋಡುಗುಮಸವಸದೆ ಮುಟ್ಟಲಣಮಿಾಯದು ತಾಂ ||
ನೋಡದೆ ಮುಟ್ಟದೆ ಜಗದೀ |
ದಾಡುಗುಮಾ ಧೂಮಕೇತುನಾಮಂ ತುರಗಂ || ೨೪ ||

ದ್ವಿಜರ್ಗೀವುದು ಮೇಣರಿಭೂ |
ಭುಜವಿಷಯಕ್ಕಟ್ಟೆ ಕಳೆವುದವನೀಹೇಮ ||
ವ್ರಜಮಂ ದಾನಂಗೊಟ್ಟಾ |
ದ್ವಿಜರಿಂ ಗೆಯ್ಯಿಸುಗೆ ಹೋಮಮಮಂ ಶಾಂತಿಕಮಂ || ೨೫ ||

ಕಾಕಸಿಯೆಡೆಯೊಳ್ ಸುೞಿ ತೋ |
ರ್ಪಾ ಕುದಿರೆಯನಾಳಲಾಗದಾಳ್ದೊಡೆ ರಣದೊಳ್ ||
ಕಾಕೋಲೂಕಗ್ರೀವ (ಶ್ಯೇನ) ಬ |
ಲಾಕಂಗಳ ಚಂಚುಪುಟಕೆ ಸೇವಿತನಕ್ಕುಂ || ೨೬ ||

ಉದರದ ಕೋಷ್ಠದ ಜಾನು |
ಪ್ರದೇಶದೊಳ್ ಸುೞಿಗಳಾದೊಡದನಾಳ್ದಾತಂ ||
ಕದನದೊಳಟ್ಟಿಗುಂ ಸೆಱೆಯೊಳ್ |
ಕುಂದಿಗುಂ ಜಂಘೆಗಳೊಳಾದ ರೋಮಜದಿಂದಂ || ೨೭ ||

ತುರಗದ ಕುಕ್ಷಿಕೆಗಳೊಳಂ |
ಗರುಹ(ದೊಳಂ)ಗಳ್ ತೋಱೆ ಸಮರದೊಳ್ ಪತಿಗಕ್ಕುಂ ||
ಮರಣಭಯಂ ಸುೞಿ ನಾಭಿಯೊ |
ಳಿರೆ ತುರಗಂ ಮಾಡುಗುಂ ರುಜಾಬಾಧೆಗಳಂ || ೨೮ ||

ಕಂ|| ಆವರ್ತಂ ಸಲೆ ಕಕ್ಷದೊ |
ಳಾವರ್ತಿಸೆ ಪತಿಗೆ ಸಮರದೊಳ್ ಶರಹತಿಯಿಂ ||
ಸಾವಕ್ಕುಂ ಪತಿಪತ್ನಿಗೆ |
ಸಾವಕ್ಕುಂ ಹಯದ ಮೂತ್ರಕೋಶದ ಸುೞಿಯಿಂ || ೨೯ ||

ಗುದದೊಳ್ ವೃಷಣದೊಳಂ ಬಾ |
ಲದ ಮೊದಲೊಳ್ ತ್ರಿಕದೊಳುರದೊಳಂ ಶಿವನಿಯೊಳಂ ||
ಕುದಿರೆಗೆ ಸುೞಿಯಾದೊಡೆ ಕೊ |
ಲ್ಲದೆ ಮಾಣ್ಗುಮೆ ರಣದೊಳಧಿಪನಂ ಮಾರ್ಗಣದೊಳ್ || ೩೦ ||

ತುರಗಕ್ಕೆ ಪಾಂಡುಪಿಂಡ |
ಸ್ತ್ರ ರೋಹಿಣಿ ಸಂಧಿ ಲಂಡ ವಾತಸ್ಥಾನಾಂ ||
ತರದೊಳ್ ಸುೞಿಯಾದೊಡದಂ |
ಪರಿಹರಿಸುವುದೇಱಲಾಗದುಗ್ರಾಹವದೊಳ್ || ೩೧ ||

ತುರಗಕ್ಕೆ ಶುಭಾಶುಭಮಂ |
ಬೆರಡುಂ ಸ್ಥಾನಂಗಳೆಡೆಗಳೊಳ್ ಸುೞಿ ಸಲೆ ಸಂ ||
ವರಿಸೆ ಸಮೀಪಸ್ಥಾನಾಂ |
ತರದೊಳ್ ಭರದಿಂ ಶುಭಾಶುಭಂಗಳನೀಗುಂ || ೩೨ ||

ಆಶ್ರಿತಮಪ್ಪ ಶಿರೋರುಹ |
ದ ಶ್ರೇಣಿಗಳುತ್ತಮಾಂಗದೊಳ್ ಪುಟ್ಟಿದೊಡಂ ||
ತು ಶ್ರೀಕರಮೆನಿಸಿಯೆ ತೋರ್ಕುಂ |
ನಿಶ್ಶ್ರೇಣಿಕಮುಳ್ಳೊಡೆ ಶುಭಮಂ ಗೆಲಲಾರ್ಕುಂ || ೩೩ ||

ತುರಗಕ್ಕೆ ಪೂರ್ವಭಾಗಾಂ |
ತರದೊಳ್ ಶುಭರಹಿತಮಪ್ಪ(ಮಾದ) ಸುೞಿಗಳ್ ಪಲವಾ ||
ಗಿರೆ ರೋ(ಲೋ)ಚಮಾನಮುಳ್ಳೊಡೆ |
ಪರಿಹರಿಸುಗುಮದಱ ದೋಷಮಭಿನವಚಂದ್ರಾ || ೩೪ ||

ವಿಪರೀತಾವರ್ತೋತ್ಕರ |
ಮಪರಾರ್ಧದೆ ತಾಮವಪ್ಪೊಡಂ ಮೇಖಲೆಯಂ ||
ತಪಹಂಸುಗುಮಾವುದಱೊಳ |
ಮಪಹರಿಪುದು ದೋಷಮೊಂದೆ ಕಕುದಾವರ್ತಂ || ೩೫ ||

ವಳಿದಗ್ಧಚರ್ಮಮಿವು ಕಂ |
ಡಳರಹಿತಂ ಮಸ್ತಕಸ್ತ್ರವಾಂಕ ಲಲಾಟಂ ||
ಗಳೊಳಪ್ಪೊಡಮಂ ಬೇಗಂ |
ಕಳೆವುದು ನೀಂ ಕಟ್ಟವೇಡ ಸುಕರವಿಳಾಸಾ || ೩೬ ||

ಕಂ|| ಆಂ(ಲಿಂ)ಗದ ಮಂ(ಮೂ)ತ್ರಮುಮಾಗಿ ತು |
ರಂಗದ ಮಸ್ತಕದೊಳಿಲ್ಲಿ ಕೀಲೋಟ್ಟಂಕೋ ||
ತ್ತುಂಗದೊಳೆ ತೋರ್ಪೊಡಮು ಮಶು |
ಭಂಗಳ್ಮಾಲ್ಕಾಳ್ಗುಮೆಯ್ದೆ ದೇಶವಿನಾಶಂ || ೩೭ ||

ತುರಗಕ್ಕೆ ಮೂತ್ರಕೋಶಾಂ |
ತರದೊಳ್ ತ(ಕ)ಲಿಯಾದೊಡಶುಭಮೆತ್ತಾನುಂ ಪ ||
ಲ್ವೆರಸು ಮಱಿ ಗರ್ಭದಿಂದವ |
ತರಿಸಿದೊಡೆ ಮಹಾವಿರುದ್ಧಮಭಿನವಚಂದ್ರಾ || ೩೮ ||

ತುರಗದ ಬಾಲದ ಮೊಳೆಯಂ |
ಕುತಕೇಸರವಾಳಸದೃಶಮಾಗಿ ಗೊ(ಯೊ)ಱಂಟಾ ||
ಗಿರೆ ಪರಿಹರಿಸುಗೆ ಮತ್ತಂ |
ತುರಗಕ್ಕೆ ಕಿರಣಗಳೊಡನೆ ಪುಟ್ಟಿದೊಡಶುಭಂ || ೩೯ ||

ಒಂದೊಂದಾದೊಡ ಮಲ್ಲಿ |
ರ್ಪಂದದೆ ರೋಮಂಗಳಾದೊಡಂ ಸಿದ್ಧಗೆಯಂ ||
ತಂದಿಟ್ಟಪ್ಪೊಂದರುಣ...............
ದೊಂದುಂ ಪುಟ್ಟಿದೊಡಮಶುಭಮಾಮುಷ್ಕಂಗಳ್ || ೪೦ ||

ಒಂದೊಂದು ಪಱಿಯ ಕಿಱಿದಾ |
ದಂದಶುಭಂ ಶುಭದಮುಕ್ಕು ಮುಷ್ಕದ್ವಂದ್ವಂ ||
ಕುಂದಿ ಕುಸಿದಸಿಯುನಾಗೆ ಕ |
ರಂ ದೋಷಂ ವಾಜಿಗಳ್ಗೆ ಕಪಿಮುಷ್ಕಂಗಳ್ || ೪೧ ||

ದಿನಜಾತ್ಯಾಕೃತಿ ಗಾತ್ರ |
ಸ್ವನ ನಾಸಾದರ್ಬುಗುಜ್ಜ ಸಂಕ್ಷಿಪ್ತಕ ದು ||
ರ್ವರ್ಣನ ಮಷ್ಟ ಜಲಸು ಮೆದಸ |
ನೆನೆ......? ಸೆತ್ತುಮಾಲ್ಕೆ ವೇಡ ಸುಕರವಿಳಾಸಾ || ೪೨ ||

ಕಕುದಿಯುಮುವಯ ಮಹೀನಾ |
ಧಿಕನುರಸ್ತನಿಯುಂ ತ್ರಿಕರ್ಣಯುಂ ದ್ವಿಮುಖನುಮಂ ||
ಧಕನುಂ ಗದೆಸಮುಷ್ಕ |
ಸಕಮಂದೋಪಕನುಂ ಭೃಂಗಿ ಕುಲನಾಶಕರಂ || ೪೩ ||

ಕಾಕವ್ಯಾಘ್ರಾಜಿನ ಮಂ |
ಡೂಕೋರಗ ಕೃಷ್ಣ ರಸನ ತಾಲುಕಶಿರನುಂ ||
ಕಾಕಮುಖನಂ......
ಅಂತಾಕಸ್ಮಿಕ ಶೋಕದುಃಖನುಂ ಮರಣಕರಂ || ೪೪ ||

## ಕುದುರೆಗಳ ಹೇಷಿತಾದಿ ಶಕುನಂ

ಕಂ|| ಬೆಳಗಪ್ಪ ಜಾವದೊಳ್ ಮಂ |
ಗಳ ಪಾಠಕ ಮೃದು ಮೃದಂಗ ಶಂಖಧ್ವಾನಂ ||
ಗಳನಾಲಿಸಿ ಸೌಷ್ಠವದಿಂ |
ಕಿಳಿಱೆ ಹಯಂ ಪತಿಗೆ ವಿಜಯಮಂ ಸೂಚಿಸಿಗುಂ *|| ೪೫ ||

ಧ್ವಜಮಂ ಬೆಳ್ಗೊಡೆಯುಂ ಮದ |
ಗಜಮಂ ಮುಗಿಲಂ ದಿನೇಶನಂ ಕನ್ನಿಕೆಯಂ ||
ನಿಜವರ್ಣಪಾತ್ರ ಸುಮನೋ |
ವ್ರಜಮಂ ಕಂಡೊಸೆದು ಕಿಳಿಱೆ ಜಯದಾಯಿ ಹಯಂ || ೪೬ ||

ಮೇಯುತ್ತುಂ ತೀವಿದ ಪುಲ್ |
ಬಾಯೊಳಗಿರೆ ಕಿಳಿಱೆ ಜಯಕರಂ.........ಶಶಿ ||
ವಿದ್ಯುತ್ಪ್ರಭೆ ಹಸಿತದೊಳಂ |
ಬಾಯಿಂದಂ ಪೊಣ್ಮೆ ಶುಭದಮಂದು ಹಯಹಸಿತಂ || ೪೭ ||

ಗಮನದೊಳೆಡದೊಳ್ ಪುನರಾ |
ಗಮನಂಗೆಯ್ವಲ್ಲಿ ಬಲದೊಳಧಿಪತಿಗೆ ತುರಂ ||
ಗಮಮೊಸೆದು ಕಿಳಿಱೆ ಧನಲಾ |
ಭಮು ಮುದಿತೋದಿಮುಮಕ್ಕುಮಭಿನವಚಂದ್ರಾ || ೪೮ ||

ದೆಸೆಗಳ ನಾಲಿಸಿ ಮೂಡಣ |
ದೆಸೆಯುಂ ನಡೆ ನೋಡಿ ದಿನಕರೋದಯದೊಳ್ ಗ ||
ರ್ಜಿಸಿ ಕಿಳಿಱೆ ವಾಜಿ ಸೈನ್ಯದೊ |
ಳೊಸೆದಾಗಳೆ ಪಯಣಮಕ್ಕುಮಭಿನವಚಂದ್ರಾ || ೪೯ ||

ಒಂದನೆಯ ಜಾವದೊಳ್ ತುರ |
ಗಂ ದಹನಾ(ಶಾ)ಭಿಮುಖದೊಳೆಬ್ದುತ್ಸಾಹಂ ||
ಗುಂದದೆ ಕಿಳಿಱುತ್ತಿರೆ ಶಿಖಿ |
ಯಿಂದಂ ಭಯಮಕ್ಕುಮೆಂದನಭಿನವಚಂದ್ರಂ || ೫೦ ||

ಎರಡನೆಯ ಜಾವದೊಳ್ ಜ |
ರ್ಝರರವದಿಂ ದಕ್ಷಿಣಾಭಿಮುಖದೊಳ್ ಕಿಳಿಱು ||
ತ್ತಿರೆ ಸತಿಸುತಂಗೆ ಮಿತ್ರಂ |
ನರಪನ ಪೆರ್ಗಡೆಗೆ ಮರಣಮಂ ಪ್ರಕಟಿಸುಗುಂ || ೫೧ ||

* ಪದ್ಯ ಸಂಖ್ಯೆ ಇಲ್ಲಿಂದ – ೧ ಎಂದು ಒಂದು ಪ್ರತಿಯಲ್ಲಿ ಆರಂಭವಾಗಿ, ಅಧ್ಯಾಯದ ಕೊನೆಯಲ್ಲಿ ೩೨– ಎಂದು ಮುಗಿದಿದೆ.

ಕಂ|| ನೋಡಿ ಹಯ ನೈಋತಿಯಂ |
ನೀಡುಂ ಕಿಳಿಱುತ್ತುಮಿರ್ಪೊಡಪರಾಹ್ಣದೊಳಂ ||
ಮಾಡುಗುಮಪಾರಭಯಮಂ |
ಮಾಡುಗುಮಧಿಪತಿಗೆ ತುರಗಮಭಿನವಚಂದ್ರಾ || ೫೨ ||

ತುರಗಂ ವಾಯುವ್ಯದಿಶಾಂ |
ತರದೊಳ್ ಘನರವದಿಂ ಪಲವು ಸೂಳ್ ಕಿಳಿಱು ||
ತ್ತಿರೆ ಪೂರ್ವರಾತ್ರಿಯೊಳ್ ತ |
ನ್ನರಸನ ಪೆರ್ಗಡೆಗೆ ಮರಣಮಂ ಪ್ರಕಟಿಸುಗುಂ || ೫೩ ||

ಬಡಗ ಮುಖಮಿರ್ದು ತುರಗಂ |
ನ(ಕ)ಡುವಿರುಳತಿರಭಸದಿಂದೆ ಕಿಳಿಱುತ್ತಿರಲಾ ||
ಕಡುಕೂರ್ಪು ತನ್ನ ಸಖನೊಳ್ |
ತಡವಿಲ್ಲದೆ ಪೋಗಿ ನೆರೆವುದಂ ಪ್ರಕಟಿಸುಗುಂ || ೫೪ ||

ತಿಸುಱುಂ ಕಾಷ್ಠಾದಿಗಳಂ |
ತಿಸುಱುಂ ನಿಸ್ಸಾರಮಪ್ಪ ಕೊಳೆವುಲ್ಲಂ ದು ||
ರ್ಮನನಾಗಿ ಕೆದಱಿ ಬಾಲಮ |
ನನವರತಂ ಕಿಳಿಱಿ ಪತಿಗೆ ಜಯಮಂ ಮಾಳ್ಕುಂ || ೫೫ ||

ಅನುನಯದಿಂ ಪೂರ್ವಾಹ್ಣದೊ |
ಳನಿಲದಿಶಾಂತರಮನೀಕ್ಷಿಸುತ್ತುಂ ಹರಿ ದು |
ರ್ಮನನಾಗಿ ಕೆದಱಿ [1]ಬಾಲಮ |
ನನವರತಂ ಕಿಳಿಱಿ ಪತಿಗೆ ಭಯಮಂ ಮಾಳ್ಕುಂ || ೫೬ ||

ಎರಡುಂಸಂಜೆಯೊಳಂ ಹರಿ |
ಹರುಸಂಗೆಟ್ಟಶ್ರುಬಿಂದು ವಿಣ್ಮೂತ್ರಂಗಳ್ ||
ಸುರಿಯೆ ಕಿಳಿಱುವೊಡೆ ಮಾಡುಗು |
ಮರಸಂಗಂ ಪಿರಿದು ಭಯಮನಭಿನವಚಂದ್ರಾ || ೫೭ ||

ಚಿಂತಿಸಿ ಮೋಹಂ ಬಿಸುಟು |
ದ್ಭ್ರಾಂತಿಸುತುಂ ಹೀನ ದೀನ ದೀರ್ಘ[2]ಸ್ವನದಿಂ ||
ದಂತೆ ಕಿಳಿಱುತ್ತೆ ಮಿಗೆ ಮಾ ||
ಳ್ಕುಂ ತಡೆಯದೆ ಪತಿಗೆ ಭಯಮನತಿದುರ್ನಯದಿಂ || ೫೮ ||

1 ಬೊಮ್ಮನ. 2 ಶ್ವನ.

ಕಂ|| ತುರಗಂ ಬಾಲಂ ಕೆದಱು |
ತ್ತಿರೆ ವಾಳಪ್ರಕರದಿಂದೆ ತಾಂ ಪೇೞ್ಗುಂ ತ ||
ನ್ನರಸಂಗೆ ಶುಭಾಶುಭಮು |
ನೆರಡುಂ ತೆಱದಿಂದಮಪ್ಪುದಂ ಪ್ರಕಟಿಸುಗುಂ || ೫೯ ||

ಕೆದಱುತ್ತುಂ ವಾಲಧಿಯಂ |
ಬಿದಿಱುತ್ತುಂ ಮೆಯ್ಯ ನೆರಡುಕಾಲೊಳ್ ನೆಲನಂ ||
ಬೆದಕುತ್ತುಂ ನಿಲೆ ತಳ್ವಿಳಿಸು |
ಲ್ಲದೆ ಮಾಡುಗು [1]ಮಾಹಯಂ ಪ್ರವಾಸಂಗಳುಮಂ || ೬೦ ||

ತುರಂಗಂ ಧರೆಯಂ ದಕ್ಷಿಣ |
ಚರಣದಿನಿಱಿದಿಱಿದು ಕೆದಱೆ ದಕ್ಷಿಣವಾಲೋ ||
ತ್ಕರಮನತಿಸುಮನಸನಾಗು |
ತ್ತಿರೆ ವಿಜಯಮನಾತ್ಮಪತಿಗೆ [2]ಸೂಚಿಸುತಿರ್ಕುಂ || ೬೧ ||

ವಾಮಂ ಪ್ರಕೀರ್ಣಮಾದೊಡೆ |
ಸಮಾನ್ಯಂ ಲಾಭಪಯಣಮಾಗಳೆ ಮುಗುೞ್ಗುಂ ||
ವಾಮಂ ದಕ್ಷಿಣಮೆರಡುಂ |
ಸಾಮಾನ್ಯಂ ಕೆದಱೆ ಪಯಣಮುಕ್ಕುಂ ದೂರಂ ೬೨

ಅತಿಶಯಮಾಗಿರೆ ಭದ್ರಾ |
ಕೃತಿಯಿಂ ವಾಲಂ ಪ್ರಕೀರ್ಣಮಾದೊಡೆ ವಿಜಯೋ
ನ್ನತಿಯುಕ್ಕುಂ ಶಬ್ದ ವಿನಿ |
ರ್ಗತ ವಾಲಪ್ರಕೀರ್ಣಮಾಗೆ ಭಯಮಂ ಮಾೞ್ಕುಂ ೬೩

ಸ್ಥಾನಾಂತರದೆಡೆಯೊಳ್ ವಾ |
ಳಾನಿವಹಂ [3]ಕೆದಱೆ ಸುಮನನಲ್ಲದೆ ತುರಗಂ ||
ಧ್ಯಾನಿಸುತಿರ್ಪೊಡೆ ದೂರ |
ಧ್ಯಾನದಿನಾಗಮನಸಂಶಯಂ ಪ್ರಕಟಿಸುಗುಂ ೬೪

## ಉ(ವು)ರಿ ಲಕ್ಷಣಂ*

ತುರಗಾನೀಕದ ಮೆಯ್ಯೊಳ
ಗುರಿ ಯುಕ್ಕುಳ್ಳಂಗಳಕ್ಕೆ [ಕಿಡಿಯುಕ್ಕೆ] ಸಕೃ ||
ದ್ವಿರಚಿತಮಪ್ಪೊಡೆ ಶೋಭನ |
ಕರ ಮಂಗ ವಿಶೇಷದಿಂದಮಭಿನವಚಂದ್ರಾ || ೬೫ ||

1 ಮಾಯಾಸಂ ಪ್ರಯಾಸಂ, ಮಾಯಾದಂ ಪ್ರ. 2 ಸೂಚನೆಯಂ. 3 ಕೆದರಿಸುವುದು ಮವನಲ್ಲದೆ.
* ಇಲ್ಲಿಂದ ಪದ್ಯ ಸಂಖ್ಯೆ ೧—ಎಂದು ಆರಂಭವಾಗಿದೆ.

ಕಂ|| ತುರಗಕ್ಕೆ ಪೂರ್ವಭಾಗದೊ |
ಳುರಿಯುಳ್ಳಂ ಕಿಡಿಗಳೆಂಬಿವಾದಂದು ವಸುಂ ||
ಧರೆ ಕಿಡುಗುಂ ಪುತ್ತ್ರದು ತಾಂ |
ಕರದೊಳ್ ಪುಟ್ಟಿದೊಡೆ ಪತಿಗೆ ಭಯಮಂ ಮಾಳ್ಕುಂ || ೬೫ ||

ಶಿರದೊಳುರಿ ನೆಗೆದೊಡಳಿಗುಂ |
ಪಿರಿಯಮಗಂ ಸ್ಕಂಧದುರಿಯೊಳಳಿಗುಂ ಪತಿಯುಂ ||
ತುರಿ ನೆಗೆದೊಡೇಱುವಾತಂ |
ಮರಣಭಯಪ್ರಾಪ್ತನಕ್ಕುಮಭಿನವಚಂದ್ರಾ || ೬೬ ||

ಉ(ವು)ರಿಕೋಶದೊಳುದಿಯಿಸಿದೊಡೆ
ಕರಗುಗುಮುಳ್ಳರ್ಥಮೆಲ್ಲಮೆರಡುಂ ರಂಧ್ರಾಂ ||
ತರಮುರಿದೊಡಾಳ್ದನಂ ಪರಿ |
ಹರಿಸುಗುಮಾತುರಗರತ್ನಮಭಿನವಚಂದ್ರಾ || ೬೭ ||

ಉರಿಯೆ ಜಘನಾಂತರಾಳಂ |
ಮರಣಂ ಪುತ್ರಂಗೆ ಕೋಶಮೋಹನಮುಷ್ಕಾಂ ||
ಕುರಮುರಿದಂದು ಕುಲಸ್ತ್ರೀ |
ಮರಣಭಯಪ್ರಾಪ್ತಿಯುಕ್ಕುಮಭಿನವಚಂದ್ರಾ || ೬೮ ||

ವಾಳಧಿಯಿಂದುರಿ ನೆಗೆದೊಡೆ |
ಕಾಳೆಗಮುಂ ಪಿರಿದು ಭಯಮುಮಧಿಪತಿಗಕ್ಕುಂ ||
ವಾಳಾದಾನಮುಮಂತಾ |
ವಾಳಧಿಯುಂ ಜ್ವಲಿತಮಾಗಲಪಜಯಮಕ್ಕುಂ *|| ೬೯ ||

ಭ್ರಾಂತೇಂ ವಾಜಿಗಳ ಶರೀ |
ರಾಂತರದೊಳಗನಲರಶ್ಮಿ ಬೆಳಗುತ್ತಿರೆ ಸಾ ||
ಮಂತಾಂತಃಪುರಪರಿವಾ |
ರಂ ತಡೆಯದೆ [1]ನಾಶಮಕ್ಕುಮಭಿನವಚಂದ್ರಾ || ೭೦ ||

ಕರವಾಳ್ ಕಡಿತಲೆ ಕೊಂತಂ |
[2]ಶರಸಂಕುಲಮಂಗರಕ್ಷೆ ಸೀಸಕಮಿವಱಿಂ ||
ದುರಿ ನೆಗೆದೊಡೆ ಕೇಡಕ್ಕೊ |
ರ್ಧ್ವರಶ್ಮಿಯಿಂ ಬೆಳಗೆ ಜಯಮಹೋತ್ಸಾಹಕರಂ || ೭೧ ||

1 ನಾಶನಮು ಮಕ್ಕು. 2 ಸರಸಂಕುಲ.

* ೭೦ನೆಯ ಪದ್ಯ ಗಳಿತವಾಗಿದೆ.

ಕಂ|| ಉರಿಯುಂ ಮೋಣ್ ಕಣ್ಗಳ |
ತೆರಳ್ಕೆಯುಂ ಪೋಲ್ವ ರಶ್ಮಿ ತುರಗಂ ಕಿಳಿಱು ||
ತ್ತಿರೆ ಬಾಯು(ಯಿ)ಂ ಪೊಱಮಟ್ಟೊಡೆ |
ದೊರೆಕೊಳ್ಗುಂ ವಿಜಯಲಕ್ಷ್ಮಿ ಪತಿಗಪ್ರತಿಮಂ || ೭೨

ಉರಿ(ಯು)ನಯನಾಂಬುಜವದನವು |
ನೊರಸುತ್ತಂ ಜಾನುದೇಶ(ಹ)ದೊಳ್ ಖುರದೊಳ್ ಗ ||
ಹ್ವರಿಯುನಿಱಿದಾ ತುರಂಗಂ |
ಭರದಿಂದಂ ಶೋಕದುಃಖಮಂ ನೆಱೆ ಮಾಳ್ಕುಂ || ೭೩ |

ಗಮನಕ್ಕೆ ನಿಜನಿವಾಸಾ |
ಗಮನಕ್ಕುಗ್ರಾಹವಕ್ಕೆ ನಡೆವ ಭಟಂ (ಭುಜಂ) ||
ಗಮದುಗ್ರಾಕೃತಿಯಂ ಭೀ |
ತಮನಂ ಪಡೆ ಮೂತ್ರಮಿಕ್ಕೆ ಹಯ(ರಿ)ಜಯರಹಿತಂ || ೭೪ ||

ಆವರ್ತಮಹಾದೋಷಮು |
ನಾಮೊಂ ತುರಗಕ್ಕೆ ಕಂಡೊಡಂ ವೇದವಿದ ||
ಗ್ರೀವುದು ಹಸ್ತೋದಕ ಸ |
ದ್ಭಾವದೆ ರಾವುತ್ತರಂ ಸುವರ್ಣಸಮೇತಂ || ೭೫ ||

ಆವರ್ತೋದ್ಭಾವಕ ದೋ |
ಷಾವಲಿ ವಾಳಪ್ರಕೀರ್ಣಮಂ ಮತಿವಂತರ್ ||
ಭಾವಿಸುಗಭಿನವಚಂದ್ರಮು |
ದೇವನ ಮತದಿಂದಮಿದುವೆ ಚತುರಧ್ಯಾಯಂ *|| ೭೬ ||

ಇಂತು ಚತುರ್ಥಾಧ್ಯಾಯಂ.

* ಇಲ್ಲಿ ಸಂಖ್ಯೆ ೩೨ ಇದೆ.

# ಪಂಚಮಾಧ್ಯಾಯಂ

## ತುರಗಾಯುಃಪರಿಮಾಣ ನಿರ್ಣಯಂ

ಕಂ|| ಎರಡುಂ ತೆಱದಿಂದಾಯುವ |
ನೆರೆಯೆ ಪರಿಕಿಸುವುದು ಬಾಹ್ಯಮಾಭ್ಯಂತರಮೆಂ ||
ಬೆರಡಱೊಳಂ ತನುವಿಂ ಬಾ |
ಹಿರಮಂ ದಶನಂಗಳಿಂದಮಾಭ್ಯಂತರಮಂ || ೧ ||

ಸ್ವರದಿಂದಮಜಿನದಿಂದಂ |
ಖುರದಿಂದಂ ಚೇಷ್ಟೆಯಿಂದಮಾದಶನಾಗ್ರಾಂ ||
ತರದಿಂದಮೊಗದವುಲ್ಕಾ |
ತೆರದಿಂದಂ ಪೇೞ್ವೆ ಹಯವಯೋಲಕ್ಷಣಮಂ || ೨ ||

ಇನಿತಾನುಂ ಸಂದಂಶಂ |
ಜನಿಯಿಸುಗುಂ ಕೇಸರುಂಗಳುಂ ಖುರಜೆಗಳುಂ ||
ತನುವುಮತಿಮೃದುಳಮಕ್ಕುಂ |
ಜನಿಯಿಸಿದಶ್ವಕ್ಕೆ ನೋಡುವೊಡೆ ಮಾಸೈಕಂ || ೩ ||

ಸಂದಂಶಮತಿವ್ಯಕ್ತಂ |
ಬಂಧುರಖುರಂ ಮೆಲ್ಪು(ಳ್ಪು)ವಡೆದತಿವ್ಯಾಲತೆಯಿಂ ||
ದೊಂದಿ ನಲಿವರಿದು ಬಲವ |
ರ್ಪಂದಾಮಱಗೆರಡು ತಿಂಗಳಭಿನವಚಂದ್ರಾ || ೪ ||

ತುರಗಕ್ಕೆ ಮಧ್ಯದಶನೋ |
ತ್ಕರಮುದಯಿಸುಗುಂ ವಿಭಕ್ತಪದನಕ್ಕುಂ ಸು ||
ಸ್ವರದಿಂ ಹೇಷಿಸುಗುಂ ಸೌಂ |
ದರ ತನುವಕ್ಕುಂ ತ್ರಿಮಾಸಪರಿವರ್ತನದೊಳ್ || ೫ ||

ಸಂದಂಶಂ ಸಮನಾಗಿರೆ |
ಬಂದಿರ್ಪಂ ಮಧ್ಯಮಂ ರತಿಪ್ರಿಯನಕ್ಕುಂ ||
ಸೌಂದರತನು ಮೇಯಲ್ಕಾ |
ರ್ಪಂದು ಚತುರ್ಮಾಸಮೆಂದನಭಿನವಚಂದ್ರಾ || ೬ ||

ಇನಿತಿನಿತುಪಾರಿಪಕ್ಷಂ (ಕ್ಷ್ಮಂ) |
ಜನಿಯಿಸುಗುಮಿದಯ್ದುತಿಂಗಳಂತಾಪಲ್ಗಳ್ ||
ಘನಘಟಿತಮಾಗಿತೋರ್ಪಂ |
ದಿನ ದೆವಸದೊಳಾಱುತಿಂಗಳಭಿವಚಂದ್ರಾ || ೭ ||

ಕಂ|| ನೇರಿದುವು ದಂತಪಂಙ್ಕ್ತಿ ಶ |
ರೀರಂ ಪಿರಿದಕ್ಕುಮಡಱ ಸಂದಂಶಂಗಳ್ ||
ಕ್ಷೀರರುಚಿ ಯಾದ್ಯೊಡದನವ |
ಧರಿಸುಗೆ ಕಿಶೋರಕಂಗೆ ಸಪ್ತಮಮಾಸಂ || ೮ ||

ತುರಗದ ಮೆಯ್ಯ ನವಿರ್ಗಳ್ ನೀ |
ಳ್ದಿರೆ ತನು ನಿರ್ಮಳಿನಮಾಪ್ರದೇಶಂಗಳ್ ಸುಂ ||
ದರವಾಗಿರೆ ಸವಮಾಗು |
ತ್ತಿರೆ ದಶನಮದರ್ಕ್ಕೆ ನೆರೆದುದಷ್ಟಮಮಾಸಂ || ೯ ||

ನವಮಾಸದೊಳಗೆ ಮಧ್ಯಂ |
ಧವಲಚ್ಛವಿಯಾಗೆ ಮಧ್ಯಮೋತ್ತಮಮೆರಡುಂ |
ಧವಲಂಗಳಾಗೆ ಕುಷ್ಮಿಕೆ |
ಯುವು ನಿಡಿಯುವು ಕೂರ್ಚರೋಮದಿಂ ದಶಮಾಸಂ || ೧೦ ||

ಉರಮುಂ ಲಲಾಟಪಟ್ಟಾಂ |
ತರಮುಂ ವಿಸ್ತೀರ್ಣಮಾಗೆ ಕೆಳಗಣ ಕಡೆವ ||
ಲ್ಲೆರಡುಮತಿಧವಳಮಾಗು |
ತ್ತಿರೆ ಪನ್ನೊಂದನೆಯ ತಿಂಗಳಭಿನವಚಂದ್ರಾ || ೧೧ ||

ಸ್ಫುರಿತಮೃದು ದೀರ್ಘಬಹುಳಾಂ |
ಗರುಹಂ ಸಂಪೂರ್ಣಮೆನಿಪ ಕೇಸರ ರೋಮೋ ||
ತ್ಕರಪಾಂಪಕ್ಷ (ಕ್ಷ್ಮ) ಮತಿಪಾಂ |
ಡುರಮಾದಂದೊಂದುವರ್ಷಮಭಿನವಚಂದ್ರಾ || ೧೨ ||

ಅಂಗರುಹಕೇಶವಾಲಚ |
ಯಂಗಳ್ ನಿಡಿಯುವು ಕಷಾಯುವರ್ಣಂಗಳ್ ದಂ ||
ತಂಗಳ್ಗೆ ಬವರಿಸುವದಂ |
ತಂಗಳ್ ಮಲಿನಂಗಳಾಗೆ ವರ್ಷದ್ವಿತಯಂ || ೧೩ ||

ಕ್ಷೀರ ಕಷಾಯಚ್ಛಾಯಾ |
ಧಾ (ಪಾ) ರಂಗಳ್ ಸ್ನಿಗ್ಧವೃತ್ತ ಘನತದ್ವಂಶಾ ||
ಕಾರಂಗಳ್ ಕಿಱಯುವು ಸುಕು |
ಮಾರಂಗಳ್ ಪ್ರಥಮಪವನಮಭಿನವಚಂದ್ರ || ೧೪ ||

ಕೂರಿದುವು ಪಲ್ಲ ತುದಿಗಳ್ |
ನೇರಿದುವಲ್ಲದು ಸ(ಂ)ಬದ್ಧ ಮೂಲಂಗಳ್ ರೀ ||
ಖಾರಚಿತಂಗಳ್ ವ್ಯಂಜನ |
ವಾರಿಗಳವು ಪೋಗಿ ಬಂದ ದಶನಾವಳಿಗಳ್ || ೧೫ ||

ಕಂ|| ಎರಡುವರೆ ವರ್ಷಮಾದೊಡೆ |
ಭಂಗಂ ಸಂದಶಮಾಕಿಶೋರದ ಸಾಂತಾಂ ||
ಗರುಹಂ ಸುಣ್ಪುದಯಿಸುಗುಂ |
ಸರಿಸಂ ಪಸರಿಸುಗುಮಲ್ತೆ ತನುರೋಮಂಗಳ್ || ೧೬ ||

ಪತಿತೋತ್ಥಿತ (ಕ್ಷತ) ಸಂದಂಶ |
ದ್ವಿತಯಂ ಸುಸ್ನಿಗ್ಧ ಬಹುಲರೋಮಂ ಸಂಪೂ ||
ರ್ಣತನು ದೃಢಮಾಂಸನುದಿತೋ |
ದಿತಸತ್ವಂ ಮೂಱುಬರಿಸಮಾದಂದಕ್ಕುಂ || ೧೭ ||

ಬರೆಗುಂ ಮಧ್ಯಮದಶನಂ |
ಸ್ಫುರಿಯಿಸುಗುಂ ನುಣ್ಪುವೆತ್ತ ತನುರೋಮಂಗಳ್ ||
ತುರಗಕ್ಕೆ ಮೂಱುಬರಿಸಮು |
ಮರೆಯಾಗಲ್ಕಿಂದ್ರಿಯಪ್ರಸನ್ನತೆಯಕ್ಕುಂ || ೧೮ ||

ಸಂಪೂರ್ಣಮಧ್ಯಮಂ ದಶ |
ನಂ ಪೊರ್ದುವುದೊಂದುತೇಜದಿಂದಂ ರೂಪಿಂ ||
ದಂ ಪೆರ್ಚಿ ಬರೆ ಪರಾಕ್ರಮ |
ಮಂ ಪಡೆದೊಡೆ ನಾಲ್ಕುವರ್ಷಮಭಿನವಚಂದ್ರಾ || ೧೯ ||

ತುರಗಕ್ಕೆ ನಾಲ್ಕುವರ್ಷಮು |
ಮರೆಯೊಳ್ ಗತಪಾರಿಪಕ್ಷ (ಕ್ವ) ಮಕ್ಕುಂ ತುದಿಯೊಳ್ ||
ಕರಮೆ ಕುಟಿಯಾಗಿ ಪಂಚಮ ||
ಬರಿಸಕ್ಕುದಯಿಸುಗುಮಲ್ತೆ ತದ್ದಂತಂಗಳ್ || ೨೦ ||

ಪ್ರಾಯಮುಮಂ ಶಾಸ್ತ್ರಾಭಿ |
ಪ್ರಾಯಮುಮನಾರಯಲ್ಕೆ ಪೇೞ್ವೆ ವಿಸ್ತಾರಣೆಯಿಂ ||
ದಾಯತಮಕ್ಕುಂ ದೇಹದೊ |
ಳಾಯುವುಮವಿಘ್ನೇಧಬಹುಳಪರಿಣಾಮಂಗಳ್ || ೨೧ ||

ಪೊಂಗಿ ಬಿಗಿದೊಗೆದ ಕಣ್ ಮಧು |
ಪಿಂಗಂಗಳ್ ವದನಮುಂ ಶಿರೋರುಹಮುಂ ದೀ ||
ರ್ಘಂಗಳ್ ಜಘನಮುಮುರಮುಂ |
ತುಂಗಂ ಪೃಥುಲಂಗಳಾಗೆ ಚಿರಜೀವಿ ಹಯಂ || ೨೨ ||

[1]ಪರುಷರವದಿಂದೆ ಸುಟಿಗುಂ |
ಚರಣಂ ದೀರ್ಘಂ ಸುಸಂಗತಾಂಗಂ ಸುಸಿರಾಂ ||
ತರಮೆಲ್ಲಂ ಪಿರಿಯವು ತನು |
ಪಿರಿದೆನಿಸಿದ ವಾಜಿ ದೀರ್ಘಜೀವಿತನಕ್ಕುಂ || ೨೩ ||

1 ಪುರುಷರುವರುಷರವ.

ಕಂ|| ಕಿವಿಯುಂ ಮೋಹನಮುಂ ಕಿಱು |
ಯುವು ನಾದಂ ಪಿರಿದು ಮಾಸವರ್ಧನದಿಂದೊ ||
ಪ್ಪುವ ತನುಗ್ರಾಸಪರಂ |
ಪವನಜವಂ ವಾಜಿ ದೀರ್ಘಜೀವಿತನಕ್ಕುಂ || ೨೪ ||

ತುರಗದ ಕಿವಿಯುಂ ಪಾಳಿಸಿ |
ಸುರಗೋಪಚ್ಛಾಯೆಯಿಂದಮರುಣಜಲಂ ಪಾ ||
ಯ್ತುರುತಿರೆ ದೀರ್ಘಜೀವಿ ನೆತ್ತರ್ |
ಸುರಿಯದ ಕಿವಿಯಿಂದಮಲ್ಪಜೀವಿತನಕ್ಕುಂ || ೨೫ ||

ತುರಗದಕೂರ್ಚಸ್ಥಾನಾಂ |
ತರದ ಕಿಣಂ ವ್ಯಕ್ತವಾಗೆ ನಾಲ್ಕುಂ ನೊಸಲುಂ ||
ಸಿರಮುಮತಿರುಂದ್ರಮಾದೊಡೆ |
ಪರಮಾಯುವನೆಯ್ದಿ ಬಾಳ್ಗುಮಭಿನವಚಂದ್ರಾ || ೨೬ ||

ಅಲಸದೆ ಪಿರಿದುಂ ಮೇಯ್ಗುಂ |
ಜಲದೊಳಗೆ ಮುಸುಂಡನಿಟ್ಟು ನೀರಂ ಕುಡಿಗುಂ ||
ನೆಲದೊಳ್ ಮೆಯ್ಯಿಕ್ಕುವೊಡೆಡ |
ಗೆಲದೊಳ್ ಪಡುಗುಂ ಚಿರಾಯುವಪ್ಪುದು ತುರಗಂ || ೨೭ ||

ಖರಕರನಂನೋಡಿ ನಭಂ |
ದೊರೆದೆಂತುಂ ನೋಡುತಿರ್ಪೊಡಂ ಶುಭ ಕಂಠೋ ||
ತ್ಕರಮುಣ್ಮುವೊಡಂ ಕಾಮಾ |
ತುರನಪ್ಪೊಡಮಾಹಯಂ ಚಿರಂಜೀವಿಕರಂ || ೨೮ ||

## ಮಱುಪುಟ್ಟಿದ ಘಳಿಗೆ

ಮೂವತ್ತುಗಟಿಗೆ ವಿಗಟಿಗೆ (ಯೊ) |
ಯಾ(ಳಾ)ವುದು ಮಱು ಪುಟ್ಟಿತದಱ ಗಟಿಗೆಯೆ ವರಿಸಂ ||
ಭಾವಿಸೆ ಮೊದಲಿಂದೆಣಿಸುವು |
ದಾವಿಪ್ಪಿಯ ಗಟಿಗೆಯನಿತೆ ಮಱುಗಾಯುಷ್ಯಂ || ೨೯ ||

ಆರ್ಯ್ಯಜನ ಪ್ರಭರೇಖಾ |
ನಿರ್ಯಾಣಮನಸೆಯೆ ಶಾಲಿಹೋತ್ರಮುನೀಂದ್ರಂ ||
ಪ್ರಾಯಕ್ಕೆ ಸೇಬ್ದುದಂ ತಾಂ |
ಪರ್ಯಾಯದಿನಱಿಯೆಪೇಲ್ದನಭಿನವಚಂದ್ರಂ || ೩೦ ||

(ಆಯೂರೇಖೆ)

ಕಂ|| ನರರಾಯುರೇಖೆ ಯುಕ್ಕುಂ |
ಕರತಳದೊಳ್ ತುರಗದಾಯುರೇಖೆಯು ಪವಣಂ ||
ಪರಿಕಿಸುವುದು ಪ್ರೋಥದೊ(ಳಗೂ)ಳೂ |
ರ್ಧ್ವರೇಖೆಯುಂ ಶಾಳಿಹೋತ್ರಮುನಿ ಭಾಷಿತಮಂ || ೧ ||

ಅತಿಗೂಢಮತಿರಹಸ್ಯಮಿ |
ದತಿಶಯಮಿದನಾರ್ಗಮಿಾಯಲಾಗದು ಶಿಷ್ಯಂ ||
ಸುತರಿವರ್ಗಂ ಕುಡುವುದು |
ಕೃತಕೃತ್ಯಪರೀಕ್ಷೆಯಿಂದಮಭಿನವಚಂದ್ರಾ || ೨ ||

ಒಂದು ಮೊದಲಾಗನುಕ್ರಮ |
ದಿಂದಬ್ದಂ ಮೂವತ್ತೆರಡುವರೆಗಂ ವಾಹಾ ||
ಸಂದೋಹಕಾಯುರೇಖೆಗ |
ಳಿಂದಾಯುಷ್ಯಗಳಂ ಕರಂ ವಿರಚಿಸುವೆಂ || ೩ ||

ಒಂದೆ ಬೆರಲೆನಿತನಿತೆ ನೀ |
ಳ್ದೊಂದಳವಿಗಳೂರ್ಧ್ವರೇಖೆ ತೋರ್ಪೊಡಂ ಮಱಿಗಂ ||
[1]ತೊಂದುವರಿಸದೊಳೆ ಮುಖರೋ |
ಗಂ ದೂಸಿಸೆ ಮರಣಮಕ್ಕುಮಭಿನವಚಂದ್ರಾ || ೪ ||

ಎರಡಸಿಯರೇಖೆ ನೀಳ್ದಿರೆ |
ಬೆರಲಳವಿಗಳೆಸೆದುತೋಱೆ ಜಂಹಾ(ಹ್ವಾ)ಸ್ಥಂಭಂ ||
ಪರಿಭವಿಸೆ ವಾಜಿಗಕ್ಕುಂ |
ಮರಣಭಯ[2]ಪ್ರಾಪ್ತಿ ಯೆರಡುವತ್ಸರದೊಳಗಂ || ೫ ||

ಎರಡನೆಯರೇಖೆ ಯಡ್ಡಂ |
ಮುರಿದಿರ್ದೆರಲಳವಿಯೊಳ್ ವಿರಾಜಿಸಿ ತೋ(ಱಲ್)ಕರ್ಣಂ ||
ಮರಣಂ ತೃತೀಯವರ್ಷಾಂ |
ತರದೆ ಗಳಗ್ರಹವಿಕಾರಕಾರಣದಿಂದಂ | || ೬ ||

ಎ(ದೆ)ಡದ ದೆಸೆಯತ್ತ ಮಿಱುಗಿ |
ರ್ಪೊಡೆ ರೇಖಾದ್ವಿತಯಮವಿದಿತಂ ಪಂಚತ್ವ ||
ಕ್ಕೊಡರಿಸೆ ಗಳಗ್ರಹಂ ಪಿಡಿ |
ದೊಡೆ ಮಡಿಗುಂ ನಾಲ್ಕುವರ್ಷದೊಳ್ ಹಯರಾಜಂ || ೭ ||

1 ತೊರಂದು. 2 ಪ್ರಾಪ್ತನುರ.

ಕಂ|| ಎರಡನೆಯುವಪ್ಪ ರೇಖೆಗ |
ಳಿರೆ ವಾಮಕ್ಕೊಱಗಿದಗ್ರದಿಂ ಪ್ರೋಥದೊಳಾ ||
ವರಿಸೆ ವೃಗಜೃಂಭದಿಂದಂ |
ಮರಣಭಯಂ ವಾಜಿಗಯ್ದುವರಿಸದೊಳಕ್ಕುಂ || ೮ ||

ಎರಡಂಗುಲಪ್ರಮಾಣಿನೊ(ದೊ) |
ಳಿರೆ [ಮತ್ತಾ] ಪ್ರೋ[1]ಥಮಧ್ಯದೊಳ್ ರೇಖೆಗಳಾ ||
ತುರಗಮದಾತಂಕರುಜಾ |
ಮರಣಭಯಮಪ್ರಾಪ್ತನಾಱುವರ್ಷದೊಳಕ್ಕುಂ || ೯ ||

ಎರಡು ಬೆರಲ್ನೀಳಂ(ಳಂ) ನಳಿ |
ದಿರೆ(ಡೆ)ರೇಖಾಮಧ್ಯಮೇೞುವರಿಸಂ ತಾಂ ||
ತುರಗಮದಾತಂಕರುಜಾ |
ಮರಣಭಯಪ್ರಾಪ್ತನಕ್ಕುಮಭಿನವಚಂದ್ರಾ || ೧೦ ||

ಎರಡೂರ್ಧ್ವರೇಖೆಗಳ್ ಮೂ |
ವೆರಲಶ್ವ(ಳಪ್ಪ)ಪ್ರೋಥಮಧ್ಯದೊಳ್ ತೋಱೆ ಮಹಾ ||
ಜ್ವರಪರಿತಾಪದೊಳಷ್ಟಮ |
ವರಿಸಕ್ಕಾವಾಜಿಗೆಯ್ದುಗುಂ ಮರಣಭಯಂ || ೧೧ ||

ತೋಱಿದುವಾಗಿರೆ ನಡುಗಳ್ |
ನೇಱಿದುವಪ್ಪೆರಡು ರೇಖೆಗಳ್ ತಾಂ ಮೊದಲಾ ||
ಕಾರದೊಳಿರೆ ನವವರುಷ |
ಪ್ರಾರಂಭದೆ ವಾಜಿ ರಾಜಶೂಲೆಗೆ ಬೀಡುಂ || ೧೨ ||

ಅಂತಪ್ಪ ರೇಖೆಗಳ್ ಪ್ರೋ |
ಥಾಂತಂಬರಮೆಸೆದು ತೋಱೆ ಪರಲೋಕಪ್ರಾ ||
ಪ್ತಂ ತುರಗಂ ದಶವರ್ಷಾ |
ಭ್ಯಂತರದೊಳ್ ಪೀಡೆಗೆಯ್ದಿಮನ್ಯ(ನ್ಯಾ)ಸ್ತಂಭಂ || ೧೩ ||

ಆರೇಖೆಗಳೆನಿತಾನುಂ |
ತೋಱಿದುವಾಪ್ರೋಥಮಧ್ಯದೊಳ್ ತಮ್ಮೆರಡುಂ ||
ನೇಱಿದುವಾಗಿರೆ ಶೂಲೆಯ |
ಕಾರಣಮೇಕಾದಶಾಬ್ದದೊಳ್ ಮರ್ದಿಸುಗುಂ || ೧೪ ||

ಎರಡುಬೆರಲ್ನೀಳದೊಳೆಸೆ |
ದಿರೆ ವಾಹಪ್ರೋಥಮಧ್ಯದೊಳ್ ರೇಖೆಗಳಾ ||
ತುರಗಂ ಮಡಿಗುಂ ದ್ವಾದಶ |
ವರುಷದೊಳತಿವೃತ್ತಮಾಗೆ ರೂಕ್ಷಾವರ್ತಂ || ೧೫ ||

ಕಂ|| ನೇರಿದ ರೇಖಾಗ್ರಂಗಳ್ |
ತೋಱುದೊಡಂ ಪ್ರೋಥಮಧ್ಯದೊಳ್ ನೀಳ್ದಿರೆ ಸಂ ||
ಧ್ಯಾರುಣಮೂರ್ಧ್ವಶ್ವಾಸವಿ |
ಕಾರದೊಳಕ್ಕುಂ ತ್ರಯೋದಶಾಬ್ದಾಂತರದೊಳ್ || ೧೬ ||

ಎರಡೂರ್ಧ್ವರೇಖೆಯುಂ ಪಾ |
ಯ್ದಿರಡಡ್ಡಂರೇಖೆ ಕಾಕಪದಮಂ ಪೋಲ್ತ(ಲ್ತೆ)ಂ ||
ತಿರೆ ಭೂತಪೀಡೆಯಿಂದಂ |
ಮರಣಂ ಪದಿನಾಲ್ಕುವರುಷದೊಳ್ [ಹಯಕಕ್ಕುಂ] || ೧೭ ||

ಎರಡೂರ್ಧ್ವರೇಖೆ ಸೈತಾ |
ಗಿರೆ ವಾಹಪ್ರೋಥಮಧ್ಯದೊಳ್ ತಿಲಮಾತ್ರಂ ||
ತರಮಗ್ರಂಗಳ್ ನುಣ್ಪಾ |
ಗಿರೆ ಪತಿಗಾಯುಃಪ್ರವರ್ಧಮಾನಂ ತುರಗಂ || ೧೮ ||

ಕುಲವೃದ್ಧಿ ಧಾನ್ಯಧನಸಂ |
ಕುಲವೃದ್ಧಿ ನೃಪಪ್ರಸಾದ ಮಧಿಪತಿಗಕ್ಕುಂ ||
ನೆಲನಂ ಪೆರ್ಚಿಸಿ ಲಕ್ಷ್ಮೀ |
ಲಲನಾಪ್ರಾಮೋದನಕ್ಕುಮದನಾಳ್ವಾತಂ || || ೧೯ ||

ಆರೋಹಕನಿಂ ಮರಣಮು |
ದಾರಂ ಹಯಕಕ್ಕುಮಾಯುರೇಖೆಯೆ ಗೌರೀ ||
ದಾರಂಗಳಾಗೆ ವಾತವಿ |
ಕಾರದೆ ಪದಿನಯ್ದುವರ್ಷದೊಳ್ ಮರಣಭಯಂ || ೨೦ ||

ಅಂತಪ್ಪ ರೇಖೆಗಳ್ ಕ |
ರ್ಷಂ ತಳೆದಾ ಪ್ರೋಥಮಧ್ಯದೊಳ್ ತೋರ್ಪೊಡೆ ಬಾ ||
ಲ್ಗುಂ ತುರಗಂ ಷೋಡಶವ |
ರ್ಷಾಂತರಮಂ ಮೂತ್ರಕೃಚ್ಛ್ರಯಿಂದಂ ಮಡಿಗುಂ || ೨೧ ||

ಅಂತಪ್ಪ ರೇಖೆಗಳ್ ಪ್ರೋ |
ಥಾಂತರದೊಳ್ತೋಱೆ ದಂತಪೀಡೆಯೊಳಕ್ಕ ||
ತ್ಯಂತಮುದಾತಂಕದೊಳ |
ಕ್ಕೆಂತುಂ ಪದಿನೇೞುವರ್ಷದೊಳ್ ಗತಮಕ್ಕುಂ || ೨೨ ||

ತುರಗಕ್ಕಂ ಗೋಱುಗೆಗಂ |
ಪರಿಕಿಸೆ ಬೇಱಿಲ್ಲದೂರ್ಧ್ವರೇಖೆಗಳೆರಡಿ ||
ಬ್ಬೆರಲಾಗಿ ರಂಜಿಸುತ್ತಿರೆ |
ತುರಗಂ ಪದಿನಯ್ದುವರ್ಷದೊಳ್ ಗತಮಕ್ಕುಂ || ೨೩ ||

ಕಂ|| ಎರಡೂರ್ಧ್ವಮೆರಡಧಸ್ಸ್ಥದೊ |
ಳಿರೆ ನಾಲ್ಕುಂ ಪ್ರೋಥಮಧ್ಯದೊಳ್ ರೇಖೆಗಳಾ ||
ತುರಗಕ್ಕುಗ್ರೋರಗನಿ(ನಿ)ಂ |
ಮರಣಂ ಪದಿನೆಂಟುವರ್ಷದೊಳ್ ಸಮನಿಸುಗುಂ || ೨೪ ||

ತುರಗಪ್ರೋಥದೊಳಂತಾ |
ಗಿರೆ ಮತ್ತಂ ನಾಲ್ಕುರೇಖೆ ಮುಷ್ಕಂಗಳ್ ಬಾ ||
ತಿರೆ ಶೋಣಿತಾಂಡದಿಂದಂ |
ತುರಗಂ ಪತ್ತೊಂಬತಬ್ದದೊಳ್ ಗತಮಕ್ಕುಂ || ೨೫ ||

ನೇರಿದುವು ಸ್ನಿಗ್ಧಮುಮಂ |
ತೋರನ್ನಮುಮಪ್ಪ ನಾಲ್ಕುರೇಖೆಯ ತುರಗಂ ||
ಮಾರಣಮಂ ವಿಣ್ಮೂತ್ರವಿ |
ಕಾರದಿನಿಪ್ಪತ್ತುವರ್ಷದೊಳ್ ಗತಮಕ್ಕುಂ || ೨೬ ||

ಅಂತಪ್ಪರೇಖೆಯು(ಯ್ದುಂ) |
[ಚಿಂತಿಸದಾ]ಪ್ರೋಥಮಧ್ಯದೊಳ್ ತೋರ್ಪೊಡೆ ಬಾ ||
ಲ್ಗಂ ತುರಗಮೇಕವಿಂಶತಿ |
ವರುಷಂ ಸಾಯ್ಗುಂ ಬಟಿಕ್ಕೆ ವಾತೋದರಿಯೊಳ್ || ೨೭ ||

ಮೂಗಿನ ಛಿದ್ರಂ(ರಂಧ್ರಂ)ಗಳ್ ನು |
ಣ್ಪಾಗಿರ್ದೊಡಮೂರ್ಧ್ವರೇಖೆಗಳ್ ಪ್ರೋಥಗಳಿಂ ||
ಬಾಗಿರೆ ಮೆಯ್ಯಿಕ್ಕಿ ಶಿ(ಸಿ)ರೋ |
ರೋಗಂ ದ್ವಾವಿಂಶತಾಬ್ದದೊಳ್ ಬರ್ದಿಸುಗುಂ || ೨೮ ||

ಅಂಕುಶಲಾಂಛನಮಂ ಪೋ |
ಲ್ತುಂ ಕುದಿರೆಗಮೂರ್ಧ್ವರೇಖೆಯಿರ್ಪತ್ತುಮೂಱು ||
ಬ್ದಂ ಕವಿ(ಳಿ)ದಾಗಳುರಸ್ತಾ |
ಪಂ ಕೊಲ್ಗುಂ ಮಿಡುಕಲೀಯದಂತಾ ಹಯಮಂ || ೨೯ ||

ಮಿನಕ್ಕಂ ಕೂರ್ಮಕ್ಕಂ |
ತೇನೊಂದಂ ಪ್ರೋಥರೇಖೆ ಪೋಲ್ತೊಡಮಿರ್ಪ ||
ತ್ತಾನಾಲ್ಕುವರ್ಷದೊಳ್ ಸಾ |
ವಾಸಂ ಭ್ರಾಂತಿಲ್ಲದಕ್ಕು[1] ಮುನಿಕರ್ಣಿ(ರ್ಣ)ಕೆಯಿಂ || ೩೦ ||

1 ಮುನಿಪರ್ಣಕೆಯಿಂ ? - ಮುನಿಕರ್ಣಿಯಿಂ ?

ಕಂ|| ತಾವರೆಯುಂ ಕೆನ್ನೆಯ್ದಿಲ |
ಪೂವಂ ಪ್ರೋಥಾಯುರೇಖೆ ಪೋಲೆ ವಿಶೇ(ಸೇ)ಷಂ ||
ತೀವಿ ಮುಖದ್ರೋಣಿಕೆಯಿಂ
ದಾ ವಾಜಿಗೆ ಮರಣಮಿಪ್ಪತಯ್ದಬ್ದದೊಳಂ || ೩೧ ||

ವೇದಿಕೆರೂಪುಂ ಪ್ರೋಥದೊ |
ಳಾದೊಡೆ ಪತಿಗಖಿಲಲಕ್ಷ್ಮಿ ಸಾಗ್ರಂ ರಸಭೋ ||
ಜ್ಯದೊಳಂ ಮರಣಮುಮಂ ಸಂ |
ಪಾದಿಸುಗುಂ ವಾಜಿಗಳ್ಗೆ ಷಡ್ವಿಂಶತಿಯೊಳ್ || ೩೨

ಧ್ವಜಸಾದೃಶ್ಯದ ರೇಖಾ
ವ್ರಜಂ ಹಯಪ್ರೋಥಮಧ್ಯದೊಳ್ ತೋರ್ಪೊಡೆ ತ
ದ್ವಿಜಯಾಶ್ವಂ ಗತನಕ್ಕುಂ
ಭುಜಂಗನಿಂದಿರ್ಪತೇಳು ಸಂವತ್ಸರದೊಳ್ || ೩೩ ||

ಚಾಪದ ಚಕ್ರದ ಶಂಖದ |
ರೂಪಮನಾಪ್ರೋಥರೇಖೆ ಪೋಲ್ತಿರೆ ಪತಿ ಲ ||
ಕ್ಷ್ಮೀಪತಿಯಕ್ಕುಂ ಜ್ವರಸಂ |
[1]ತಾಪದೆ ಹಯವಿರ್ಪ[2]ತೆಂಟು ವರ್ಷದೊಳಳಿಗುಂ || ೩೪ ||

ಧ್ರುವಸದೃಶಪ್ರೋಥದ ರೇ |
ಖೆ ವಿರಾಜಿಸೆ ಪತಿಗಭೀಷ್ಟಫಲಮಂ ಮಾಳ್ಕುಂ ||
ನವವಿಂಶತ್ಯಬ್ದದೊಳ್ ಪ್ರಾ |
ಣವಿಯೋಗಂ ವಾಜಿಗೆಂದನಭಿನವಚಂದ್ರಂ || ೩೫ ||

ಶ್ರೀವೃಕ್ಷಂ ಕನ್ನಡಿ ನಂ |
ದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕಮೆಂ ||
ಬೀ ವಿವಿಧಲಾಂಛನಂ[3]ಗಳ |
ನಾವರಿಸಿದ ವಾಜಿಗಾಯು ತ್ರಿಂಶದ್ವರ್ಷಂ || ೩೬ ||

ಧನಧಾನ್ಯವೃದ್ಧಿ ರಿಪುಸಾ |
ಧನಸಂಹರಣಂ[ಜಯವನಿತಾ]ರಮಣಂ ಶ್ರೀ ||
ವನಿತಾಧಿಪತ್ಯನಕ್ಕುಂ |
ಜನಪದ[ಸುಖದಾಯಿ]ಯಕ್ಕುಮದನಾಹ್ಲಾದಂ || ೩೭ ||

1 ತಾಪದೇಟಿಯಕ್ಕುಂಹಯವಿರ್ಪ 2 ಪ್ಪತೇಳು 3 ಗಳಮನನಾದ ಬೆಳಸಿದ

ಕಂ॥ ಹರಿಚಕ್ರಮನಕ್ಕೆ ಪುರಂ |
ದರವಜ್ರಮನಕ್ಕೆ ರೇಖೆಗಳ್ ತಾಂ ಪೋಲು ||
ತ್ತಿರೆ ತುರುಗಪ್ರೋಥದೊಳಾ |
ತುರಂಗವುಂ ಮೂವತೊಂದು ಬರಿಸಂ ಬಾಳ್ಗುಂ || ೩೮ ||

ಅರಸನದನೇಱಲುರದೊಳ್ |
ಪರನೃಪರಂ ಗೆಲ್ದು ರಿಪುಮಹೀತಳಮಂ ಸಂ ||
ವರಿಸಿ ಸುಖದಿಂದಮಾಳ್ವುದ |
ನಱಿವುದು ಪಲಕಾಲಮೆಂದನಭಿನವಚಂದ್ರಂ || ೩೯ ||

ದಿನಕರನನರ್ಧಚಂದ್ರನ |
ನನುಕರಿಸಿದ ಪ್ರೋಥರೇಖೆಯಿಂದಂ ರಿಪುಮ ||
ರ್ದನನಾಗಿ ಬಾಳ್ಗುಮದನಾ |
ಳ್ವ ನೃಪಂ ಹರಿ ಮೂವತೆರಡುವರ್ಷಂ ಬಾಳ್ಗುಂ || ೪೦ ||

ಮಾಡಿದೊಡಮತಿರೂಕ್ಷ ಮಾದೊಡಂ ಫಲಮಲ್ಪಂ ||
ಕಡು...................... |
..............................ರೇಖೆಯೆ ಶುಭದಂಗಳ್ || ೪೧

ಇದುಚಂದ್ರ............... |
.................ಪ್ರೋಥರೇಖಾನಿರ್ಯಾಣಾದಿ
ಮೊದಲಿನ ಮೂವತ್ತೆರಡ |
ಬ್ದದ.................................... || ೪೨ ||

ಇಂತು ಪಂಚಮಾಧ್ಯಾಯಂ

# ಷಷ್ಠಾಧ್ಯಾಯಂ

## ಶರೀರದಂಗಭೇದದಿಂ ಆಯುಷ್ಯದ ಪವಣಂತಿಳಿವುದು

ಕಂ|| ಮೊದಲೊಳ್ ರೇಖಾ................ |
....................ಕುದಿರೆಗೆ ಶರೀರದಿಂ ಪೇ ||
ಳ್ವುದುವಮೂವತ್ತೆರಡಬ್ದದ |
..................................................... || ೧ ||

ದುರ್ಗಂಧ ನಾಭಿಯಿಂದಂ |
ದುರ್ಗಂಧಂ........................................ ||
................................ |
ದುರ್ಗುಣವಂಟು ಕಟುವುದೊಂದು ಸಂವತ್ಸರದೊಳ್ || ೨ ||

................................ |
..................ಮೋಷ್ಠಂಗಳಕ್ಷಿವರ್ತಂಗಳ ||
................................ |
....................ದ್ವಿತೀಯವರುಷಂ ಬಾಳ್ಗುಂ || ೩ ||

ನಳಿಯು........................ |
........ಕ್ಷಿ ಕೂಟ ದುರ್ಗಂಧಂಗಳ್ ||
ಕೋಳಿನಾವೊಡೆ............ |
........ಬಾಳ್ವುದು ಮೂಱು ಸಂವತ್ಸರಮಂ || ೪ ||

........................ಮಧಿ |
ಕವಲ್ಪ ಮಲಮುಪ್ಪೊಡಂತು ನೊಸಲಸಿದಾ ||
ಗುವುದುಮದು ಕಳೆಯಲಾಗದು |
ಜವಹೀನಂ ವಾಜಿ ನಾಲ್ಕು ಸಂವತ್ಸರಮಂ || ೫ ||

ನೇಱದುವಲ್ಲವು[1]ರೂಕ್ಷಾ |
ಕಾರದೆ ಹೀನಾಧಿಕಂಗಳಾಗಿರೆ ಪಲ್ಗಳ್ ||
ಈರಯ್ದುಂ ಧ್ರುವೆಗಳ್ ಸ್ಥಾ |
ನಾರುಹಮಲ್ಲದೊಡಮಯ್ದುವರ್ಷದೊಳಟುಗುಂ || ೬ ||

ಹೀನಧ್ರುವನುಂ ಪ್ರೋಥ |
ಸ್ಥಾನ ವಳಿತ್ರಯನುಮುಳಿಪನುಂ ಪಡಪೆಯು ಮ ||
ತ್ಯಾನತ ಸಿರನುಂ[2] ಲಂಡ |
ಸ್ಥಾನಾವರ್ತನು ಮದಾಱು ವರ್ಷದೊಳಟುಗುಂ || ೭ ||

1 ಶಕ್ಷಂಹೀರೆದೆ 2 ಮಂಡಲ

ಕಂ|| ಹೃದಯಾವರ್ತಂ ವಶ್ವಾಜರ್ಕ |
ಳುದ ಕಣ್ಣಂ ಪೋಲ್ವಕಣ್ಗಳುನ್ಮೀ(ನ್ಮೀ)ಲಿತನೇ ||
ತ್ರದೆ[1]ಲಂಡನಾತಿ ಯಪ್ಪಾ |
ಕುದಿರೆಯದು ಗತಾಯುವಕ್ಕುಮೇೞಬ್ದದೊಳಂ || ೮ ||

ವುಃ(ಳಿ)ೞದಟ್ಟೆ ತಿಂಬವೋಲ್ ಕ |
ಣ್ಗಳನಳ್ಕುರೆಬಿಟ್ಟೆ ಲರ್ಚಿಮೋಹನವುಂ ಪೊ ||
ರ್ಚುಟನೆತ್ತಿಕುಟ್ಟೆ ರಂಧ್ರಂ |
ಗಳನಕ್ಕುಳಿಸಿರ್ದೊಡೆಂಟುವರ್ಷದೊಳೞಗುಂ || ೯ ||

ಹಯದುತ್ತರೋಷ್ಠಮೂಲಾ(ಲ) |
ಶ್ರ(ಪ್ರಿ)ಯವಾಗಿರ್ಕುಂ ಪ್ರಪಾದದಾವರ್ತಂ ಸಂ ||
ದೆಯವಿಲ್ಲದೆ ತಿರುಗುವ ವಾ |
ಜಿಯ ಬೆನ್ನೊಳಗಯ್ದೆ ಮರಣ ನವವರ್ಷದೊಳಂ || ೧೦ ||

ಬಿಳಿದುಂ ಕರಿದುಂ [2]ಬಿಸದಂ |
ಕೊಳುಗುಂಗಳಿವೆಯಿಕ್ಕದಕ್ಷಿಗಳ್ ವಿಭ್ರಾಂತಾ ||
ಕುಲಚಿತ್ತವಡಂಗಿದ ಗುದ |
ವಲಯದಿನಾ ವಾಜಿ ಪತ್ತುವರ್ಷಂ ಬಾೞ್ಗುಂ || ೧೧ ||

ಕಡುರೋಮದ ವಿಚ್ಛಾಯದ |
ಕಡುಮುಳಿಸಿನ ಚಪಳವೃತ್ತಿಯತಿಲೋಲುಪದಾ ||
ಜಡಭಾವದ ಹರಿಗಕ್ಕುಂ |
ತಡೆಯದೆ ಪನ್ನೊಂದುವರ್ಷ[3]ದೊಳ್ ಮರಣಭಯಂ || ೧೨ ||

ನಳಿದಿರ್ಪ[4]ಕೂರ್ಮಮುಖದಿಂ |
ತೊಳಗುವ ಮೆಯ್ಮುವಿರ್ಗಳಿಂ ಮಹಾಬಾಹುಗಳಿಂ ||
ಬಳೆದಿರ್ದ ಶೃಂಗಿಯಿಂದಂ |
ಕಳೆಯದು ಪನ್ನೆರಡುವರ್ಷ[5]ಮುಂ ಹರಿ(ಯ)ಶಾಖಂ || ೧೩ ||

ಕ(ಖ)ರಭಾಕ್ಷಂ ಮೃದ್ವಂಗಂ |
ಖರ[6]ಖುರನಾರಕ್ತರಸನ ತಾಲ್ವೋಷ್ಠಂ ಭಾ ||
ಸುರರೋಮದ ತುರಗಂ ಪ |
ನ್ನೆರಡುಂ ಮೇಣೊಂದುವರ್ಷದೊಳ್ ಗತಮಕ್ಕುಂ || ೧೪ ||

1 ಲಂಡತಿಯೆನಿಪ್ಪ 2 ಬೆರಸಿಹ ಬಿಸದ 3 ಕಕ್ಕುಂ ಮರಣಂ 4 ರೋಮ ದಿಂಡಯು ಮುಱುಗುಂ 6 ಖರವಾಲಕಳುದ ರಸನೆ

ಕಂ|| ಜಾನುಹನುಕೇಸರಂ ತ್ರಿ |
ಸ್ಥಾನಕಮುಂ ಸ್ಥೂಲಮಂತೆ ಸುಚ್ಛವಿ ನಿರ್ಮಾಂ ||
ಸಾನತಘೋಣಂ ಸೂಕ್ಷ್ಮ ಸ |
ಮಾನಖುರದೆ ಹರಿ ಚತುರ್ದಶಾಬ್ದದೊಳೞಿಗುಂ || ೧೫ ||

ಪಿರಿಯೆಲು ಮೇಢ್ರ[1]ಖುರಂ ಕಾ |
ಲ್ಕೊರಲುಂ ನಿಡಿಯವು [2]ದಿಶಾವಲೋಕನದಿಂದಂ ||
ಸ್ಫುರಯಿಪ ವಿಲೋಚನಂಗಳ |
ತುರಗಂ ಪದಿನಯ್ದು ವರ್ಷದೊಳ್ ಗತಮಕ್ಕುಂ || ೧೬ ||

ಆಯತಸಂಸ್ಥಾನಬೃಹ |
ತ್ಕಾಯಂ ವಿಸ್ತೀರ್ಣಜಘನಜಠರನುಂ ವೈ ||
ಡೂರ್ಯಚ್ಛವಿಲೋಚನ[3]ನದ |
ಕ್ಕಾಯುಷ್ಯಂ ಷೋಡಶಾಬ್ದನಭಿನವಚಂದ್ರಾ || ೧೭ ||

ನಿಡಿದಪ್ಪಕೊರಲ ನಾಳಂ |
ಬಡೆದತಿಗಂಭೀರದೀರ್ಘಸ್ವರದೊಳ್ ತಾಂ ||
ಪೊಡರಿಪ ಮಹೋದರಾಶ್ವಂ |
ಪಡೆಗುಂ ಪದಿನೇೞುವರ್ಷಮಾಯುವ ಪವಣಂ || ೧೮ ||

ನೇರಿದುವು ಖುರಗಳತಿಸುಕು |
ಮಾರಂಗಳ್ ವಜ್ರದಂಷ್ಟ್ರನಂಭೋಧರಗಂ ||
ಭೀರಸ್ವನ ಪರದನನಂ |
ದಾರಿಗೆ ಪದಿನೆಂಟುವರ್ಷದೊಳ್ ಮರಣಭಯಂ || ೧೯ ||

[4]ಲಂಬನವೃಷಣಸಮಾಯು |
ಕ್ತಂ ಬಡ(ಡೆ)ದಾಯತಶರೀರಜಠರಂ ನುಣ್ಪಿಂ ||
ದಂ ಬೆಳಗುವ [5]ಸುಚ್ಛವಿಯು ಹ |
ಯಂ ಬಾೞ್ಗುಂ ವರ್ಷಸಂಖ್ಯೆಪತ್ತೊಂಬತ್ತುಂ || ೨೦ ||

ಕಿವಿಗಳ್ ಕಿಱಿಯವು ನಿಜತನು |
ಛವಿಗಳ್ ನುಣ್ಣಿದುವು ನಾದಮಾದಂ ಪಿರಿದೊ ||
ಪ್ಪುವ ರೂಪು ಬೃಹಜ್ಜಠರಂ |
ಜವಯುಕ್ತಂ ವಾಜಿಗಾಯು ವಿಂಶತಿವರ್ಷಂ || ೨೧ ||

1 ಗುದಂ 2 ವಿಶಾಲ 3 ಚನಾಶ್ವಕ್ಕು 4 ಅಂಬರ 5 ಸುಧಾಚ್ಛಾಯು

ಕಂ|| *ಪಿರಿದಪ್ಪ ಕರ್ಣನಾಸಾಂ |
ಕರ[1]ನಧರವಿಷಾಣಜಾನುದೇಶಂಗಳನಾ ||
ವರಿಸಿದ ತುರಗಕ್ಕಿರ್ಪ್ಪ |
ತ್ತೆರಡಬ್ದಂ[2]ನೆಱೆ[3]ಯೆ ತೋಱುಗುಂ ಮರಣಭಯಂ || ೨೨ ||

ವಳಿಗಳನೆಂಟಂ ಪ್ರೋಥದೊ |
ಳೆಳವಡಿಕುಂ ಗುಣಗಣಾಳಿರಾಜಿತತೇಜೋ ||
ನಿಳಯಂ ಗಂಭೀರ[3]ರವಂ |
ಕಳೆಗುವದಿರ್ಪತ್ತುಮೂಱುವರ್ಷ[4]ಮನೆನಿಸುಂ || ೨೩ ||

ನವರಂಧ್ರಾಂತರಮುಂ ಪಿರಿ |
ಯುವು[5] ವೃಷಣಂ ಸೂಕ್ಷ್ಮಮಗ್ನದಶನಂ ಕಣ್ಗೊ ||
ಪ್ಪುವ ಮಧುಪಿಂಗಾಕ್ಷಂಗಾ |
ಯುವು ಮಿರ್ಪತ್ತುನಾಲ್ಕುವರ್ಷಮವೋಘಂ || ೨೪ ||

ಗುಣವಂತಂ ಸತ್ವಗುಣಾ |
ಗಣಿತಂ ನಿರ್ಮಳಿನದಶನನಾಯುಷ್ಯಂ ಬ ||
ಲ್ಕಣೆಯಿರ್ಪ್ಪತ್ತೈಯ್ದಬ್ದದೆ |
ಕ್ಷಣ ಮಾತ್ರಕ್ಕಱಿವುದೆಂದನಭಿನವಚಂದ್ರಂ || ೨೫ ||

ನೊಸಲಾವರ್ತಂ ವಾಮದ |
ದೆಸೆಯಂ ಪೊಂದಿರ್ಕುಮಪ್ಪೊಡಂ ಮಸ್ತಕಮುಂ ||
ಬಿಸಮಾಗಿ ತೋರ್ಪೊಡಂ ಭಾ |
ವಿಸುಗಿರ್ಪತ್ತಾಱುವರ್ಷದೊಳ್ ಮರಣಭಯಂ || ೨೬ ||

ನಿಡಿದಪ್ಪ ಗುದಮುಖಂ ನೀ |
ರ್ಗುಡಿವೊಡೆ ನಾಸಾಪುಟಂಗಳಿಂದೆ ನೀರಂ ||
ಕುಡಿಗುಂ ಲಕ್ಷಣಯುಕ್ತಂ |
ಮಡಿಗುಂ ಹಯಮಿರ್ಪತೇೞುಸಂವತ್ಸರದೊಳ್ || ೨೭ ||

ಹರುಷರವದಿಂದೆ ಸುೞಿಗುಂ |
ಚರಣಂಗಳ್ ನಿಡಿಯವಂತೆ ಕರ್ಣಂ ಶ್ರೋತ್ರಂ ||
ಪಿರಿಯುವೆನೆ ಲಕ್ಷಣಂಗಳ್ |
ಪರಮಾಯುವನಿರ್ಪತೆಂಟುವರ್ಷಂ ಬಾೞ್ಗುಂ || ೨೮ ||

---

1 ಸುದರ 2 ಬಾೞ್ಗುವೆಂದನಭಿನವಚಂದ್ರಂ 3 ನಿನಾದಂ, ನಿನದಂ, ನಾದಂ 4 ಮನಿಕುತಂ
5 ಪೃಷ್ಠಂಕಿಱುದು

*ಇಪ್ಪತ್ತೊಂಬನೆವರ್ಷದಲಕ್ಷಣವು ಎಲ್ಲಾ ಗ್ರಂಥಗಳಲ್ಲೂ ಗಳಿತವಾಗಿದೆ.

ಕಂ|| ನೀೞ್ದಿರೆ ಕರ್ಣಯುಗಂಗಳ್ |
ನೀೞ್ದಿರೆ ಮುಷ್ಕದ್ವಯಂಗಳುಂ ಕಕ್ಷೆಗಳುಂ ||
ನೇೞ್ದಿರೆ ತನುವುಂ ಪ್ರಾಣಂ |
ನೀೞ್ದಿರ್ಕುಂ ವಾಜಿಗಳ್ಗೆ ನವವಿಂಶತಿಯೊಳ್ || ೨೯ ||

ಕಿಱಿದಪ್ಪ ಬೆನ್ನುಮೇಢ್ರಂ |
ಕಿಱಿದಕ್ಕುಂ ಶ್ಯಾಮಕರ್ಣನಾದಂ ಕಿಱಿದ ||
ಲ್ಲದ ನಾಸಾಪುಟ ಮೆಱೆವೊಡ |
ಮಱೆ ಹಯನಂ [1]ಮೂವತಬ್ದದೊಳ್ ಮರಣಭಯಂ || ೩೦ ||

ಕೊರಲೊಳ್ ಗಂಗೆಯ ದೊವಲುಂ |
ನೆಗೞ್ದಿರೆ ತಾಂ ಗಂಗೆ ವಾರಿಯೆಂಬುದಱಿಂದೇಕೋ ||
ತ್ತರ ತ್ರಿಂಶತಿಯೊಳ್ ವಾಜಿಗೆ |
ಮರಣಭಯಂ ತೋರ್ಕುಮೆಂದನಭಿನವಚಂದ್ರಂ || ೩೧ ||

ದುಂದುಭಿಗಭೀರನಿನದಂ |
ಸುಂದರವೃಷಭವಿನೂತಪುಣ್ಯಾಹದ ಘೋ ||
ರೆಂದೆಸೆವ ರವದೆ ಪರಮಾ |
ನಂದದೆ ಹರಿ ಮೂವತೆರಡುವರ್ಷಂ ಬಾೞ್ಗುಂ || ೩೨ ||

ಇದು ಚಂದ್ರವರ್ಮ ನಿರ್ಮಿತ |
ವಿದಿತಾಯುಜ್ಞಾನದೊಳಗೆ ಮೂವತ್ತೆರಡ ||
ಬ್ದದ ಜೀವಿತಾಬ್ದವನೆ ಪೇ |
ೞ್ದುದು ವಾಜಿಯ ತನುವಿನಿಂ ಪರೀಕ್ಷಿಸಿ ವಿಬುಧರ್ || ೩೩ ||

### ‡ಸ್ವಸ್ಥಾರಿಷ್ಟಂ

ಸ್ವಸ್ಥಾರಿಷ್ಟಂ ಮುನ್ನ |
ಸ್ವಸ್ಥಾರಿಷ್ಟಂ ಬೞಿಕ್ಕೆ ಪೂರ್ವಾಚಾರ್ಯರ್ ||
ವಿಸ್ತಾರಿಸಿದ ರಹಸ್ಯಮ |
ನಾಸ್ಥಿತಿಯೊಳ್ ನೆಗೞೆ ಪೇೞ್ದನಭಿನವಚಂದ್ರಂ || ೩೪ ||

ನೆೞಲೊಳ್ ತಲೆಗಾಣದೊಡಂ |
ನೆೞಲೊಳ್ ರೌ(ಛಿ)ದ್ರಂಗಳಾಗಿ ತೋಱುವೊಡಂ ಮಾ ||
ಹಳವಲ್ಲದೆ ಕುಂದುವೊಡಂ |
ಕೞಿಯೆ ಕರಂ ರೂಪುಗೆಟ್ಟಿರಲ್ ಮರಣಭಯಂ || ೩೫ ||

1 ದಱಿಂತ್ರಿಂಶದಬ್ದದೊಳ್

‡ಇಲ್ಲಿಂದ ಪದ್ಯಸಂಖ್ಯೆ ೧, ೨, ಎಂದಿದೆ, ಪ್ರಾಯಶಃ ಪ್ರತಿಯೊಂದು ವಿಷಯಕ್ಕೂ ಪದ್ಯಸಂಖ್ಯೆಯನ್ನು ಮಾರ್ಪಡಿಸಿರುವಂತೆ ತೋರುವುದು, ಮತ್ತು ಇಲ್ಲಿಗೆ ಆಱನೆಯ ಅಧ್ಯಾಯವು ಮುಗಿದಂತೆಯೂ ತೋಱುವುದು.

ಕಂ|| ಶೀಲಾಚಾರಮು ಸತ್ವಮು |
ಶೀಲಮನಾಚಾರಮಲ್ಪಸತ್ವಂ ವೈದ್ಯಂ ||
ಪಾಲಿಸದೆ ಮೇಯದಶ್ವಂ |
ಕಾಲಮುಖಪ್ರಾಪ್ತನೆಂದನಭಿನವಚಂದ್ರಂ || ೩೬ ||

ತೀವಿದ ಮೆಯ್ ಬತ್ತುವೊಡಂ |
ತೀವಿರ್ಪೊಡಮಶ್ರುಬಿಂದು ಚಕ್ಷುರ್ದ್ವಯದೊಳ್ ||
ಭಾವಿಸಿ ಕೃತೇಂದ್ರಿಯಂಗಳು |
[1]ಮಾವರಿಸಿರೆ ಬೞಬೞಾಗಿ ಬಾಯ್ ಬತ್ತುವೊಡಂ || ೩೭ ||

ತನುಶೋಫಮೇಱಿ ಮೆಯ್ ಝು |
ಮ್ಮನೆ [2]ನವಿರೊಗೆತರೆ ಪುರೀಷಮೂತ್ರಂಗಳ್ ಭೋ ||
ರೆನೆ ಪರಿಯೆ ಪೊಳೆಯೆ ಮ[3]ಲಮುಂ |
ಜನಿಯಿಸೆ ದುರ್ಗಂಧಮಾಗೆ ಸಾಯ್ಗುಂ ತುರಗಂ || ೩೮ ||

ಪಡಲಂ ಕವಿದೊಳಪುಗೆ ಕ |
[4]ಣ್ಗಿಡುವೊಡೆ ನೀರ್ ಸುರಿಯೆ ಪಕ್ಕಮೆತ್ತಿರೆ[5]ಮುಷ್ಕಂ ||
ಸಡಿಲಿರೆ ತುರಗಕೆ ಮರಣಂ |
ತಡೆಯದೆ ಸಮನಿಸುಗುಮೆಂದನಭಿನವಚಂದ್ರಂ || ೩೯ ||

ಒತ್ತಿದೊಡೆ ಮುಷ್ಕಕೋಷ್ಠಮ |
ನೆತ್ತಿದವೋಲ್ ಮೆಲ್ಪುಗೆಟ್ಟು ಬಲಿದಿರೆ ಮೆಯ್ ಕಣ್ ||
ಪತ್ತೆ ಕಱದಾಗೆ ನಾಲಗೆ |
ಸತ್ತಪುದಾ ವಾಜಿಯೆಂದನಭಿನವಚಂದ್ರಂ || ೪೦ ||

ಬಹ್ವಾಶಿಯಪ್ಪ ತುರಗಂ |
ವಿಹ್ವಲನಾಗಿರ್ದು ಮೇಯದಿರ್ದೊಡಮೆಂತುಂ ||
ಬಹ್ವಾಶಿಯಲ್ಲದಶ್ವಂ |
ಬಹ್ವಾಹಾರಕೆ ಪಡೆದೊಡಂ ಮರಣಭಯಂ || ೪೧ ||

ಬಾಡಿದ ಬಹಿರ್ಮುಖಂ ನೀ |
ರೋಡಿದ ಬಾಯ್ ಪ್ರಕೃತಿವಿಕೃತಿಯಾದೊಡೆ ತುರಗಂ ||
ನೋಡೆರಡುತಿಂಗ[6]ಳಿಂಗಮ |
ಮೋಡುವುದಾ ಜವನ ಭವನಮಂ ಮುಟ್ಟುವಿನಂ || ೪೨ ||

1 ಮೇವಿಕ್ಕೆ ಬರ್ಪೊಡೆ ಲೇಸಿಲ್ಲದು ಸಪ್ತರಾತ್ರಿಯೊಳ್ ಮರಣಭಯಂ 2 ಮ್ಮನೆಪೋಗೆ ಪುರೀಷವಾತಮೂತ್ರಂಗಳ್ 3 ಮಲೆ 4 ಣ್ಮಿಡುಗದೆ 5 ಮುಖಂ 6 ಳಂದಿಂಗೋ

ಕಂ|| ಬೆಸೆವೊಡಮಂಗೋಪಾಂಗಂ |
ಮುಸುಱುವೊಡಂ ಮಕ್ಷಿಕವ್ರಜಂ ಮೆಯ್ಯಂ ಪ ||
ರ್ಜಿಸುಗುಂ ಸ್ವಸ್ಥಂ ಪ್ರಾಣಮು |
ನಸಂಶಯಂ ತಿಂಗಳೊಳಗೆ ಸುಕರವಿಲಾಸಾ || ೪೩ ||

ನೊಸಲೊಳ್ ಪುಟ್ಟಿದ ಶೋಫಂ |
ಪಸರಿಸಿ ತಲೆ ಬಾತು ಸುಯ್ವೊಡಂ ಗುದಮುಖದೊಳ್ ||
ಪಸರಿಸಿದ ಬಾಹು ಬಾಲದೊ |
ಳೆಸೆವೊಡಮಾವಾಜಿ ವಿಗತಜೀವಿತನಕ್ಕುಂ || ೪೪ ||

ಪಿರಿದುಂ[1] ಮೋಗುಂ ಮುಖದಿಂ |
ನೊರೆವೆರಸಿದ ಲೋಳೆ ಸುರಿಗು ದುಃಖಿತನಕ್ಕುಂ ||
ಬರೆ ಮೂತ್ರಪುರೀಷದ ಸಿ |
ಲ್ಕಿರೆ[2] ಬೀಟ್ಗುಂ ವಾಜಿ ವಿಗತಜೀವಿತನಕ್ಕುಂ || ೪೫ ||

ಎಮೆಯಿಕ್ಕವು ಕಣ್ಗಳ್ [3]ಖಾ |
ಣಮನೊಲ್ಲದು ಲದ್ದಿ ಗತ್ತವಾತಂಗಳನ ||
ಶ್ರಮದಿಂ ಕಳೆಯದು ಮೇಯದು |
[4]ವಿಮೋಹಿತಂ [5]ವಾಜಿಗಕ್ಕು ಗತಜೀವಿತನಂ || ೪೬ ||

ಕೇಸರಮೆಣ್ಣೆಯ ನೆಸೆದಿರೆ |
ಪೂಸಿದವೋಲ್ ತೊಡಗಿ ಪಿಡಿದು ತೆಗೆವೊಡೆ ಕೆಯ್ಯೊಳ್ ||
ಕೇಸರಮೆ ಕಿಟ್ಟುಬರ್ಪೊಡೆ |
ಲೇಸಲ್ಲದು ಸಪ್ತರಾತ್ರಿಯೊಳ್ ಮರಣಭಯಂ || ೪೭ ||

ನಾಲಗೆ ವಿವರ್ಣಮಾಗೆ ವಿ |
ಶಾಲತೆಗೆಟ್ಟುಡುಗಿ ಕಠಿನಮಾದೊಡೆ ಬೆನ್ನುಂ ||
[6]ಲೀಲೆಗಿಡೆ ಬಲಿಯೆ ಮುಳಿಸಂ |
ಪಾಲಿಸೆ ಹರಿಮರಣಚಿಹ್ನಮಭಿನವಚಂದ್ರಾ || ೪೮ ||

ತಿಳಿದಿರ್ದ ನೀರೊಳಶ್ವಂ |
ನೆೞಲಂ ಕಾಣದೊಡಮಲ್ಲಿ ಮುೞುಗಿದೊಡಂ ಕೆ ||
ಯ್ಗಿಟ್ಟಿಯೆ ವಿಪರೀತ ಚೇಷ್ಟೆಗ |
ಳಳವಟ್ಟೊಡಮೊಂದೆ ಪಕ್ಷದೊಳ್ ಮರಣಭಯಂ || ೪೯ ||

1 ಮೊಯ್ಯಂ 2 ಬರ್ಕುಂ 3 ತಾಣ, ಕಾಣ 4 ಕ್ರಮಮಿರೆ ತಾಂ ವಾಜಿಮರಣತಪ್ಪದನೋಘಂ
5 ಗಳ್ಗೆ ಗತಜೀವಂಗಳ್ 6 ಕೀಲಿಸಿದಂತಿರೆ

ಕಂ|| ಸ್ವಸ್ಥಾರಿಷ್ಟಮಿದಂ ಬಹು |
ವಿಸ್ತರದಿಂ ತಿಳಿಯೆ ಮುಂದೆ ಪೇಟ್ದಪೆನಿನ್ನ ||
ಸ್ವಸ್ಥಾರಿಷ್ಟಮನದನಂ |
[1]ಶಾಸ್ಥಿತಿಯೊಳ್ ತಿಳಿವುದೆಂದನಭಿನವಚಂದ್ರಂ || ೫೦ ||

[2]ಕೊರಲುಱುಗೆಡದೆಸೆಯೊಳ್ ನೆ |
ತ್ತರ ಧಾರೆಗಳುಣ್ಮೆಪೊಣ್ಮೆ ವಾಜಿಗೆ ತೋರ್ಕುಂ ||
ಮರಣಭಯಮೊಂದೆ ತಿಂಗ |
ಳ್ವರೆಗಂ ನಿರ್ವಹಿಸದೆಂದನಭಿನವಚಂದ್ರಂ || ೫೧ ||

ತನು[3]ಶೋಫಮೇಱಿ ಮೆಯ್ಯ್ ರ್ಘು |
ಮ್ಮನೆ ಬೆಮರುತ್ತಿರ್ಕುಮಪ್ಪೊಡಂ ಕಾಗೆಯ ಗೂ |
ಡಿನ ಗಂಧಂ ನಾಱುವೊಡಂ |
ಮನವಿಕ್ಕುವೊಡಂ ಹಯಕ್ಕೆ ತಪ್ಪದು ಮರಣಂ || ೫೨ ||

ಬಿದಿರದು ಶಿರೋಜಮಂ ಬೀ |
ಸದು ಬಾಲಮಂನೆತ್ತದಡಿಯನಱಿಮೇವ(ಹ)ಂ ಮೇ ||
ವು(ಯ)ದು ಪಲ್ದಿಂಬುವ ಜಾನಿಪ |
ಕುದುರೆ ಗತಾಯುಷ್ಯ[4]ನೆಂದನಭಿನವಚಂದ್ರಂ || ೫೩ ||

ಬಾಲಂಬೀಸದು ನುಡಿಗಳ |
ನಾಲಿಸದಾಹಾರಚಿಂತೆಗೆಯ್ಯದು ಕಿವಿಗಳ್ ||
ಕೀಲಿಸಿ ಕಂಪಿಸೆ ಜಾನಿಸೆ |
ಕಾಲಮುಖಪ್ರಾಪ್ತನಕ್ಕುಮಭಿನವಚಂದ್ರಾ || ೫೪ ||

ಸುರಿಯುತ್ತಿರೆ ಬಾಯಿಂ ಬೆ |
ಳ್ನೊರೆ ಗಂಧಂ ಪೊಲ್ಲದಾಗೆ ವಿಣ್ಮೂ[5]ತ್ರಂ ನೆ ||
ತ್ತರ ಬಣ್ಣಮಾಗೆ ಮೇ(ಹ)ಪಂ |
ಪರಿಹರಿಸಿರೆ ವಾಜಿ ವಿಗತಜೀವಿತನಕ್ಕುಂ || ೫೫ ||

ಪಡುವೊಡೆ [6]ಕಟಮೊಡೆವಿನೆಗಂ |
ಕೆಡವೊಡೆಮುಱಿಮೇ[7]ವು(ಹು)ವೆರಸು ಬಾಯೊಳ್ ವು(ನೆ)ಲ್ಲಂ ||
ಮಡಗಿದೊಡಂ ಜಡಿದೊಡೆ ಬಿಡಿ |
ದೊಡೆ ಶಂಕಿಸದಿರ್ಪುದೆಪ್ಪೊಡಂ ಮರಣಭಯಂ || ೫೬ ||

1 ಸ್ವಸ್ತಿಯೊಳಂ ಪೇಟ್ದು ಮೆಚ್ಚಿಪಂ ಭೂಜನರಂ 2 ಕೊರಲುರುಗಿಲೋಳಿ ಬಾಯೊಳ್ ನೆ 3 ಶೊಬಗ ಮುರಿಯೆ 4 ಮೆಂದು ಪರಿಹರಿಸುವುದದಂ 5 ತ್ರಂಪೊಲ್ಗೆನೆಸೆ 6 ಕಡವೆಂದಡವಿನೆಗಂ 7 ಮೇವುನೋಮಾಡಂ

ಕಂ|| ಸ್ವಸ್ಥಂ ತೊಟ್ಟನೆ ಭ[ರ]ದಿನ |
ವಸ್ಥೆಯ ನೆಯ್ದು ವೊಡವಮಾತ್ಮ ಸಂ(ಸ್ವ)ಸ್ಥಾನಕದಿಂ ||
ದುಸ್ಸ್ಥಿತನಪ್ಪೊಡಮದು ಮರ |
ಣಸ್ಥಿತಿ ದೆಂಡಪ್ರಹಾರಮಂ ಬಗೆಯದೊಡಂ || ೫೭ ||

ನೀರನವಗಱಿಯ [1]ನುಂಡು ಶ |
ರೀರಂ ಬಡವಾಗೆ ತಲೆಯನೆತ್ತದೆ ವದನಂ ||
ನೀರೋಡಿ ಬಾಡೆ ಮರಣಮ |
ನಾರಾಧಿಸಿ ತನಗೆ ತಂದುದೆಂದಱಿವುದದಂ || ೫೮ ||

ಭೋರೆನೆ ಬಸಿಱುಬ್ಬೆ ಕರಂ |
ಪೂರಿಸುಗುಮಪಾನವಾಯು ಜಠರಮನದನಂ ||
ತಾರಯ-ಧ್ದಂ ಕಡೆಗಣ್ಣಿಂ |
ನೀರಂ ಬೆಂಬಲಿದು ತೋರ್ಪೊಡಂ [2]ಮರಣಭಯಂ || ೫೯ ||

ಬಸಿಱೆತ್ತಿಕಟ್ಟಿ [3]ಕಜ್ಜೆರೆ |
ಬೆಸೆದಿರೆ ಪಲ್ಲಂ ತಿನುತ್ತುಮಿರೆ ಕಾಲಂ ಘ ||
ಟ್ಟಿಸುತುಮಿರೆ ಬಿಲ್ದು ನೆಲದೊಳ್ |
ಬಸವಳಿದಱಿಮೋಹುಮೋಯೆ ಬಾಡಿದು ತುರಗಂ || ೬೦ ||

ನೆತ್ತರ್ ಬಾಯಿಂ ಮೂಗಿಂ |
ಮ್ಮ(ಕು)ತ್ತಿಗೆಯಿಂ ಕೋಶದೇಶದಿಂ ಗಳಗಳ ಸೋ ||
ರುತ್ತಿರೆ ಯೆರಡಳ್ಳೆಯೆ ಪೊ |
ಯ್ವುತ್ತಿರೆ ವಾಜಿ ವಿಗತಜೀವಿತನಕ್ಕುಂ || ೬೧ ||

ಕೆಚ್ಚಗಿರೆ ಕಣ್ಣಪೊಟ್ಟೆಯು |
ಮಚ್ಚಗಳುಂ ತಾಲುದೇಶಮುಂ ಗುದಮುಖಮುಂ ||
ಮುಚ್ಚಂಬೋಗಿ ಮನಂ ಕ |
ಣ್ಮಂಚ್ಚಿರೆ ದಕ್ಕಾಲಿ ವೀಱೆ ಬಾಡಿದ್ದು ತುರಗಂ || ೬೨ ||

ಅರುಣಾಂ(ಗಂ)ಕ್ಷಂ ತೊಟ್ಟನೆ ಪಾಂ |
ಡರ ಮಾಡೊ[4]ಡೆ ಮುತ್ತುಪ್ಪೋಲ್ತ ಧವಲಾಕ್ಷಂಗಳ್ ||
ಕರಿದಾಗಿ ತೋರ್ಪೊಡಂ ಪರಿ |
[5]ಹರಿಸದು ತುರುಗಕ್ಕೆ ಮರಣಮಭಿನವಚಂದ್ರಾ || ೬೩ ||

1 ನೀಂಟೆ 2 ತದುಮರಣಂ 3 ಕರ್ಚಿರೆ 4 ಡಮಂತುವಲ್ತು 5 ಹರಿಪುದು

ಕಂ|| ತುರಗದ ಕಣ್ಣಿಂದಂ ನೆ |
ತ್ತರ ಪನಿಗಳ್ ಬೀೞೆ ಗಜವಿಲೋಚನದಂತಾ ||
ಗರೆಮುಚ್ಚಿ ಜಾನಿಸುತ್ತಿರೆ |
ಮರಣಭಯಾಕುಲಿತನೆಂದನಭಿನವಚಂದ್ರಂ || ೧೪ ||

ಬಿದಿರದು ಮೆಯ್ಯ[1]ನಣಂ ಪೊರ |
ಳದು [2]ಕೋಷ್ಠಂ ಕಾಷ್ಠಮಪ್ರತಿಷ್ಠಿತಚರಣಂ ||
ಪದದೊಳ್ ಮೇಯದು ಬೆಂಬೀ |
ೞ್ವುದು ಕುಷ್ಠಿಕೆ[3]ಯುರಲದಿರ್ದೊಡಂ ಮರಣಭಯಂ || ೧೫ ||

ಅಡಿಗಡಿಗೆ ಮೆಯ್ಯನಿಕ್ಕುಗು|
ಮೆಡಗೆಲದೊಳ್ ಕಂದಿಕುಂದುಗುಂ ಮುಖಮೋಷ್ಠಂ ||
ಕಿಡುಗುಂ ಮುಂದಣ ಪುಲ್ಲಂ |
ತುಡುಕದು ತದ್ವಾಜಿ ವಿಗತ ಜೀವಿತನಕ್ಕುಂ || ೧೬ ||

(ಶ್ರೋತ್ರ ಲಕ್ಷಣಂ)

ಲೋಗ(ಯಿ)ಸರದೆಲೆಯರಸದಂ |
ತಾಗಿರೆ ಕಿಸುಳಗು[4]ದ ನೀರ ತೆಱದಿಂ ಬೆಳರ್ಗಂ ||
ಪಾಗಿರೆ ಕರ್ಣಂ ಧ್ರುವರುಚಿ(ಧಿ) |
ರಾಗಮ ಮಾವಾಜಿಗಾಯ್ತು ವಿಂಶತಿವರ್ಷಂ || ೧೭ ||

ಅರನೇೞಲ ಪಣ್ಣಂತಿರೆ |
ಕರಿದಾಗಿರೆ ಕಿವಿಯನೆತ್ತರಾ ಹಯಕಕ್ಕುಂ ||
ಮರಣಂ ಷೋಡಶವರ್ಷಾಂ |
ತರದೊಳ್ ತಳ್ವಿಲ್ಲದೆಂದನಭಿನವಚಂದ್ರಂ || ೧೮ ||

ಒತ್ತಿದೊಡೆ ನೀಲವರ್ಣದ |
ನೆತ್ತರ್ ಕಿವಿಯುಗ್ರದಲ್ಲಿ ರೂಕ್ಷಚ್ಛವಿಯೊಳ್ ||
ಪತ್ತಿರ್ದರೂಕ್ಷಮಾದೊಡೆ |
ಸತ್ತಪು[5]ದೆಂದಱಿಗೆ ನಾಲ್ಕು ಸಂವತ್ಸರದೊಳ್ || ೧೯ ||

[6]ದಾಸಾಳದಲರ ಕುಂಕುಮ |
ಕೇಸರದ ಬೆಳರ್ತ ಬಣ್ಣದಂತಿರೆ ರಕ್ತಂ ||
ಸೂಸಿ ತುದಿಗಿವಿಯ ನೊತ್ತಿದೊ |
ಡಾ ಸಿಸು ಪದಿನೆಂಟುವರ್ಷಮಂ ನೆಱೆ ಬಾೞ್ಗುಂ || ೨೦ ||

1 ಬಣಂತಾಂ 2 ತಾಂ ಮುಷ್ಕಕಾಷ್ಠಮೆತ್ತಿದ 3 ತಾಂಬಲಿವುತಿರ್ದೊಡಂ 4 ನಾಡ 5 ದೆಂಟನೆಯ ವರ್ಷಕೆಂದಱುವುದದಂ 6 ದಾಸಳದಲರಂ

ಕಂ|| ಒತ್ತಿದೊಡೆ ತುದಿಯ ಕಿವಿಯೊಳ |
ಗೆತ್ತಂ ಮಸಿಯಂತುಟಪ್ಪ ನೀರೊಱೆದೊಱೆದೊಗೆ ||
ಯುತ್ತಿರ್ದೊಡ ಮಿಲ್ಲದೊಡಂ |
ಮತ್ತಮಹೋರಾತ್ರದೊಳಗೆ ತಪ್ಪದು ಮರಣಂ || ೭೧ ||

ಸೂನಾಕ್ಷಿಕೂಟಮುಭಯ |
ಸ್ಥಾನಕಮು ಮಗಂಧಮುಂ ತ್ರ(ಪ್ರ)ಯೋದ[1]ಶಕಧಿಕಂ ||
ಹೀನಮೆನಿಸಿರ್ದೊಡಂ ತದು(ದ) |
ಹೀನ[2]ವಿಯಚ್ಛಾಯೆಯುಪ್ಪೊಡಲ್ಪಾಯುಷ್ಯಂ || ೭೨ ||

ಚಲನಂ ಪ್ರೋಥಂ ತಾಲುಗೆ |
ಮಲಿನಂ ದುರ್ಗಂಧನಧ್ರುವಂ ವಿಷಮಾಂಗ ||
ಸ್ಖಲಿತನತಿರಾಗಿ ಲೋಲುಪ |
ನಿಳಯಂ ಚಿರಜೀವಿಯಲ್ತು ಸುಕರವಿಲಾಸಾ || ೭೩ ||

ಅಂಗರುಹ ಕೇಶವಾಳ ಚ |
ಯಂಗಳು ಮಾದಂತಪಙ್ಕ್ತಿಗಳ್ ರೂಕ್ಷಸ್ಥೂ ||
ಲಂಗಳ್ ನಱಿದುಡಿದೊಡೆದ ಖು |
ರಂಗಳ್ ಕುಬ್ಜಂಗಳಾದೊಡಲ್ಪಾಯುಷ್ಯಂ || ೭೪ ||

## ಕುದಿರೆ ಹುಟ್ಟಿದ ಕ್ಷೇತ್ರಭೇದಂ

ತುರಗೋತ್ಪತ್ತಿಕ್ಷೇತ್ರಾಂ |
ತರಂಗಳಯ್ವತ್ತುನಾಲ್ಕು ನರ್ಮದೆಯಿಂದು ||
ತ್ತರದೊಳ್ ಕುಲಬಲ ತೇಜಃ |
ಸ್ವರೂಪದೆ ಜವಪ್ರಮಾಣಪರಿಪೂರ್ಣಂಗಳ್ || ೭೫ ||

ಬಿಸಕಾಂಭೋಜಕ ಬಾಹ್ಲೀ |
ಕಸೈಂಧವಾರಟ್ಟ[3]ತೈತಿಲಂವಾನೇಯಂ ||
ಪೆಸರ ಕ್ಷೇತ್ರದ ಹಯಕಾ |
[4]ಪೆಸರೆ ಪೆಸರ್ ಜಾತಿಗಳ್ ಗುಣಾಧಾರಂಗಳ್ || ೭೬ ||

*ಖರಗಂಧರ್ವ ಕವುಲ್ ಖರೋಷ್ಟ್ರ ವಿಭವಂ ಕಾಂಭೋಜ ಜಾಳಂಧರಂ |
ತುರಗಂ ಮೂಡಣ ಕೊಂಗ ಕೋಶಲ ವರಾಳಂ ಬರ್ಬರಂ ತೈತಿಲಂ ||
[5] ದುರಭಾನೀಕರಹಾಟ ಮಾಗದ ಕಳಿಂಗಂ [6]ಸಿಂಧು ಕೊಲ್ಲಾಪುರಂ |
ತುರಗಂ ಸೇಹುಣಮಾದಿಯಾಗಲಿನಿತುಂ ಕ್ಷೇತ್ರಂಗಳೊಳ್ ಪುಟ್ಟುಗುಂ || ೭೭ ||

1 ಪ್ರಯೋಧಿಕನಧಿಕಂ 2 ವೀರ್ಯ 3 ತೈತಿಲಂ ವಾನೆ(ಪೇ)ಯಂ, ತೈತಿಲಂನಾಪೇಯಂ, ಕೈಕೆಯುಂ ಲಂಕಾದತಿಯುಂ 4 ಪೆಸರೆ ಪೆಸರೆಂದು ಪೇೞುಗುಣನಾಮಂಗಳ್ 5 ದುರಜಾಶೀ 6 ಕೇರಳಂ ಸಿಂಧು ಜೋಪುರಲಸೆಯುಗೋರಕ್ತಮಾಗಲಿನಿತುಂ ಕ್ಷೇತ್ರಂಗಳಶ್ವಂಗಳಾ ॥

*ಈಪದ್ಯವು ಎಲ್ಲಾ ಪ್ರತಿಗಳಲ್ಲೂ ಮುಂದೆ ಇದೆ

ಕಂ|| ವಾಯುಕಸಂಚತ ನವಮಲಜ |
ನೇಯುತಮಂ ನಾಳಿ[1]ದಿರ ಸಮಿನಿಯಾಯಿಕ ||
ವಿನೀಯಕ ಮಾದಿಯಾಗಿ ರ |
ಲಾಯತಮಯ್ವತ್ತು ನಾಲ್ಕು ಜಾತಿ ತುರಂಗಂ || ೭೮ ||

ವಿದಿತಂ ಕ್ಷೇತ್ರಂಗಳ್ ನ |
ರ್ಮದೆಯಿಂದಂ ತೆಂಕ(ನೋಡೆ)ತೊಂಭತ್ತ ದಱೊಳ್ ||
ಕುದಿರೆ ಕನಿಷ್ಠಂ ತಾಂ ತೇ |
ಜದ ಕುಲದ ಜವದ ಪ್ರಮಾಣಸತ್ವಂಗಳೊಳಂ || ೭೯ ||

ದ್ವಿಜನಾಧಿಯಾಗೆ ವರ್ಣ |
ವ್ರಜಮಂ ಸಿತರಕ್ತ ಪೀತ ಕೃಷ್ಣಾಂಗಹಯು ||
ವ್ರಜದ ಗುಣಂಗಳನಾರ |
ಯ್ದು ಜಾತಿಯಂ ಪೇೞ್ವುದೆಂದನಭಿನವಚಂದ್ರಾ || ೮೦ ||

ಜಲಕೇಳಿ ಗಂಧ ಪುಷ್ಪಾ |
ವಲಿ ಲಾಜಾಘೃತ ಮಧುಪ್ರಿಯಂ ಶುಚಿ ಕೇಳೀ ||
ವಿಲಸಿತ ಸುನಿದ್ರ ಗಾಂಧ |
ರ್ವಲಕ್ಷಣಂ ದ್ವಿಜಹಯಂ ಸಶುದ್ಧಶ್ವಾಸಂ || ೮೧ ||

ಆಯತಸಂಸ್ಥಾನ ಬೃಹ |
ತ್ಕಾಯಂ ತೇಜಸ್ವಿ ಲಘುಪದಂ ಶುಚಿ ಶೂರಂ ||
ತೋಯಧರಸ್ವನನುಗ್ರ |
ಶ್ರೀಯುತನಭಿಮಾನಿ ಕುಲದೊಳದು ರಾಜಹಯಂ || ೮೨ ||

†ಆಗತಮೆನಿಸಿದನಿಜನದ |
ನಾಗತಮುತ್ತ ದಱೊಳುತ್ತಮಂ ಮಧ್ಯಮಮೊಂ ||
ನಾಗೆ ಕನಿಷ್ಠಾರ್ಥಮನೊಂ |
ದಾಗತ ನಾಲ್ಕುಂ ತೆಱಕ್ಕಮಯ್ದು ಯ್ದು ಕ್ಕುಂ || ೮೩ ||

ಅತಿಜವನತಿಮೃದುಮತಿಶುಚಿ |
ಜಿತೇಂದ್ರಿಯಂ ಸುಖಿವಿನೀತ ನತಿಮೇಧಸ್ಸಮ ||
ನ್ವಿತ ಸುಪ್ರಮಾಣ ದೇಹಂ |
ಪ್ರತಿಹತನಾಹಾರಶಕ್ತ ತುರಗಂ ವೈಶ್ಯಂ || ೮೪ ||

---

1 ವಿರಪಾವಿಸಪೂಯುತಮೆಂಬೀ ಪೆಸರಿಂದಾಯುತ, ವೀರಪಾಹಿಸಮಿಾ

† ಇದು ಹಿಂದಿರಬೇಕು

ಕಂ|| ಕ್ರೂರಂ ಮದನನಶೌಚಿ ವಿ |
ಕಾರಿ ವಿಹಾ(ರೂ)ಪಂ ವಿರೋಧ(ಧಿ)ಸಂ ವಿಷಮಾಂಗಂ ||
ದಾರುಣಗಂಧಂ ಕರ್ಣಕ |
ಠೋರವಚಃಪ್ರಭೃತ(ತಿ)ಚೇತಸಂ ಶೂದ್ರಹಯಂ || ೮೫ ||

ವಾತಪ್ರಕೃತಿಯ ಗುಣಂಗಳ್ |
ಮಾತಾಪಿತೃಗಳ್ಗೆ ಮುನ್ನಮುಳ್ಳೊಡೆ [1]ಮುಱಿಯುಂ ||
ವಾತಿಕನಕ್ಕುಂ ಪೈತ್ತಿಕ |
ಜಾತಿಕನುಂ ಶ್ಲೇಷ್ಮಕಾಂಗನುಂ ತಜ್ಜಾತಂ || ೮೬ ||

ವರುಷಶರದ್ಧೇಮಂತಾಂ |
ತರದೊಳಸಂಕ್ರಮದೆ ಗರ್ಭಮಾದೊಡೆ ಬೇಗಂ ||
ಹರಿವಿಡಿಯಿಂ ಪ್ರಕೃತಿಗಳಾ |
ದ(ವ)ರಿಸಿ ಮರುತ್ಪಿತ್ತ ಕಫಮನೊಳಕೊಂಡಿರ್ಕುಂ || ೮೭ ||

ಸಮದೋಷಕರಂ ಶಿಶಿರಾಂ |
ಗಮಮಂತಾಗ್ರೀಷ್ಮಮುಂ ವಸಂತಮುಮಿವಱೊಳ್ ||
[2]ಸವನಿಸೆ ಗರ್ಭಾದಾನಂ |
ಸವಕಂ ತತ್ಪ್ರಕೃತಿಗಳ್ ಗುಣಾಧಾರಂಗಳ್ || ೮೮ ||

ದ್ವಂದ್ವಜ ಪಿತೃಮಾತೃ[3]ತೆಯಿಂ |
ದ್ವಂದ್ವಜಯವಸಾನ್ನ ಪಾನಖಾನಾದಿಗಳಿಂ ||
ದ್ವಂದ್ವಜ ಋತುಸಂಗತದಿಂ |
ದ್ವಂದ್ವಪ್ರಕೃತಿಗಳೆ ಪುಟ್ಟುಗುಂ ತುರಗಂಗಳ್ || ೮೯ ||

ಭೀತಂ ಬಲಮಿಾಯದ ಚಲ |
ಚೇತನನತಿರೂಕ್ಷನಸುಖಿ ಘೃತಲವಣಾಮ್ಲ ||
ವ್ರಾತಾಸಕ್ತಂ [4]ಸಂದಾ |
ವಾತ ಪ್ರಕೃತಿಯ ಗುಣಂಗಳಭಿನವಚಂದ್ರಾ || ೯೦ ||

ನೀರಂ ನೆಟಲಂ [5]ಶೀತಾ |
ಹಾರಮನಿನಿದಪ್ಪುವೆಲ್ಲಮಂ ಕೈಪೆಗಳಂ ||
ಪಾರುತ್ತಿರ್ಕುಂ ತೀಕ್ಷ್ಣಮ |
ದಾರಿ ಬೆಮರ್ವುದು ಜಯಪ್ರಯುಕ್ತಂ ಮತ್ತಂ || || ೯೧ ||

1 ಮಱಿನೀಂ. 2 ಸಮನಿಸುಗು ವಾತಪಿತ್ತಂ ಸುಮನೋಹರ ಶ್ಲೇಷ್ಮಪ್ರಕೃತಿಯುಂ ಹಯಕಕ್ಕುಂ. 3 ಗಳಿಂ. 4 ಪಂಥಾ. 5 ಸ್ನಿಗ್ಧಾಹಾರಂ ಮಸಿಯಸುಗು ಗುಪ್ಪುತಿಕ್ತ... ಸಾರಾಹಾರಮಿವೆಂಬಿವು ಮೋರಂತಿರೆ ನಿದ್ರೆಯಿನಿತು ಶ್ಲೇಷ್ಮ ವಿಕಾರಂ.

ಕಂ|| ವಿರಳವ್ಮೃದು ಸೂಕ್ಷ್ಮಮಪ್ಪಂ |
ಗರುಹಂ ದೀಪ್ತಾಗ್ನಿಯಿಂದಮಿರುಳುಂ ಪಗಲುಂ ||
ಪಿರಿದುಂ ಮೇಯುತ್ತಿರ್ಕುಂ |
ತುರಂಗಮಂ ಪೈತ್ತಿಕಾಂಗಮಭಿನವಚಂದ್ರಾ || ೯೨ ||

ಕಲಿ ಕಟು [1]ತಿಕ್ತಪ್ರಿಯ ನತಿ |
ಬಲಯುತ ನಲ್ವಾಶಿ ಮಂದಗಮನಂ ಲಕ್ಷ್ಮೀ ||
ನಿಲಯಂ [2]ಶ್ರಮದೂರಂ ತಾಂ |
ಸಲೆ ಶ್ಲೇಷ್ಮಿಕ[3]ವಾತ್ರಿ ಶಾಧ್ವದೊಳ್ ಸ್ಥಿರ[4]ಸತ್ವಂ || ೯೩

ಶೀತಕ್ಕ ಮಾತಪಕ್ಕಂ
ವಾತಕ್ಕಂ ಮಧುರ ರಸಕ್ಕೆ ಕರ್ಮಾಂತರಸಂ ||
ಘಾತಕ್ಕಂ ಪಡುರಸಕಂ |
ಪ್ರೀತಂ ಸಮಪಾವಕಂ ಸಮಪ್ರಕೃ(ಭೃ)ತಿ ಹಯಂ || ೯೪

ಕರಿದಕ್ಕುಂ ವಾತಾತ್ಮಕ |
ನರುಣಂ ಶೀತಾತ್ಮಕಂ ಸಿತಂ ಶ್ಲೇಷ್ಮಾತ್ಮಂ
ತರುಣಂ ಶೋಣಂ ನೇತ್ರಾಂ |
ತರವರ್ಣದಿನಱಿದು ಕೊಳ್ಗೆ ದೋಷತ್ರಯಮಂ || ೯೫

ಶ್ರೀಯುತನತಿಮೇಧಾವಿ ಚಿ |
ರಾಯುಷ್ಯಂ ಭದ್ರಲಕ್ಷಣಂ ಶುಚಿಯೆಂದಿಂ
ತೀಯಯಿದ್ದುಗುಣಮುಮಂ ಪ
ರ್ಯಾಯದೆ ತಾಳ್ದಿದ ತುರಂಗಮಂ ಸತ್ವಗುಣಂ || ೯೬

ಅತಿದೋಷಿ ದುಃಖಭಾಜನ |
ನತಿಕೃಶನಲ್ಪಾಯು ಚಪಲನೆಂಬೀಗುಣ ಸಂ ||
ತತಿಯಂ ತಾಳ್ದಿದ ತುರಗ |
ಪ್ರತತಿ ರಜೋಗುಣವಿಲಿಪ್ತನಭಿನವಚಂದ್ರಾ || ೯೭

ಮತಿಹೀನನು ಮಾಲಸ್ಯನು |
ಮತಿನಿದ್ರಾಪೂರ್ಣನಯನನುಂ ಪೇಡಿಯುಮಾ ||
ನತಶಿರಸಂದಂಶನು ಮ |
ಪ್ಪತುರಗಂಮುಮದು ತಮೋಗುಣಿಹೀನಂ || ೯೮

1 ತೀಕ್ಷ್ಣ. 2 ಕ್ಷಮಾ. 3 ಪ್ರಕೃತಿ ಶಾದ್ವರದೊಳ್. 4 ರತ್ನಂ.

ಕಂ|| ಕುದುರೆಗಳಾಯುರ್ಜ್ಞಾನಂ |
ವಿದಿತಕ್ಷೇತ್ರಾಂತರಂ ಕುಲಪ್ರಕೃತಿ(ಭು)ಗುಣಂ ||
ವಿದಿತಮಿದುಂ [1]ಷಷ್ಠಾಧ್ಯಾ |
ಯದ ವಿರಚನೆ ಚಂದ್ರಮಾತಮಿಳಾವಳಯಹಿತಂ || ೯೯ ||

ಇಂತು ಷಷ್ಠಾಧ್ಯಾಯಂ

1 ಮಿವುಮಷ್ಟಮಾಧ್ಯಾಯದ ಸಪ್ತಮಾಧ್ಯಾಯ. (ಇದರಿಂದ ಹಸ್ತಲಿಖಿತ ಪ್ರತಿಗಳಲ್ಲಿ ಅಧ್ಯಾಯ ಸಂಖ್ಯೆಯು ಹೆಚ್ಚು ಕಡಿಮೆಯಾಗಿದೆ.)

# ಸಪ್ತಮಾಧ್ಯಾಯಂ

## ಪೋಷಣವಿಧಿ

ಕಂ|| [1]ಪೋಷಣವಿಧಿಯಂ ದಿವ್ಯ ವಿ |
ಭೂಷಣಮಂ ಪತಿವಿನೋದವಿಗ್ರಹದೊಳ್ [2]ಸಂ ||
ತೋಷಣಮಂ ಬುಧಜನ ಸಂ |
ಭಾಷಣಮಂ ವ್ಯಕ್ತಮಾಗಲಭಿವರ್ಣಿಸುವೆಂ || ೧ ||

ದ್ರು(ಸಿ)ತವಾತಪಿತ್ತ ಕಫಸಂ |
ತತಿಹರಣಂ ಸಪ್ತಧಾತು ಪಂಚೇಂದ್ರಿಯದು ||
ನ್ನತ(ತಿ)ಬಲವಿವರ್ಧಮಾನಂ |
ಘೃತಸಹಿತಂ [3]ಸರ್ವಕಾಲ ಜನಿತೋತ್ಸಾಹಂ ೨

ಕ್ಷೀಣಂ ಬಾಲಂ ವೃದ್ಧಂ |
ಕ್ಷೀಣೇಂದ್ರಿಯನತಿದೂರಗಮನಕಾಸಶ್ವಾಸಂ ||
ಕ್ಷೀಣಹಯಸಂಕುಲಕ್ಕ |
ಕ್ಷೂಣಂ ಸಂದುಗ್ಧ ಪಾನಮೊಳ್ಳಿತ್ತೆಂದಂ | ೩

ಪಾನಲಕ್ಷಣಂ

ಜ್ವರಿತಂ ಗರ್ಭಿಣಿಗಂ ತಾಂ |
ಕರಮೆ ಶಿಶುತ್ವದ ಕಿಶೋರಗಮನಷ್ಟೋ||
ತ್ತರ [4]ನಾಲ್ದೆ ಐದ ವ್ಯಾಧಿಯ |
ತುರಗಕ್ಕಂ ಕ್ಷೀರಪಾನಮೆಂಬುದು ಯುಕ್ತಂ || ೪ ||

ಲಾಯಲಕ್ಷಣಂ

ಬ(ಬಿ)ಸಿದಿರ್ಪುದಯುಕ್ತಂ ಮಂ |
ಡಿಸುವುದು ಮುಂಡಿಗೆಯ ತುದಿಗಳಂ ಕುಱಿತೆಮರಂ
ಪಸರಿಸಿ ತೆಳ್ಗಲ್ಲೊಳ್ ಘಟ |
ಯಿಸುವುದು [5]ಸುಸ್ಥಾನ ಶಯನನಪ್ಪಂತೆ ನೆಲಂ || ೫ ||

[6]ಸೋರದ ನಿವಾತವಪ್ಪಾ |
ಗಾರಂ ಮಱಿಗಾಲದಂತು(ದು)ಮಾಗೆಯು ದೆವಸ ||
[7]ಕ್ಯೋರಂತಿರಾತಪಚ್ಛಾಯಾ |
ಗಾರಂ ತಾಂ ಗ್ರೀಷ್ಮಕಾಲದೊಳ್ ಸುಸ್ಥಾನಂ || ೬ ||

---

1 ಪೊಸಪತಿವಿನೋದವಿಗ್ರಹದೊಳ್. 2 ಸಂತೋಷಂ ಪೆಚ್ಚಿದ್ದನವರ್ಗೆವಿಭೂಷಣಮಂ ವ್ಯಕ್ತಮಾಗಲಭಿನಮಿಜಂದ್ರಾ. 3 ಸರ್ವಸ್ವಕಾಲ. 4 ನಾಜಿದಸಾಲ್ದೆ ಅಲ್ಪತ್ತುವ್ಯಾಧಿಯ. 5 ಸ್ವಸ್ಥಾನಶಯನಮಾಗಿರೆನೆಲನಂ. 6 ಸೋದರ, ಸಾದರ, ಸಾರದ. 7 ಕ್ಕಾರೊಳ ಮಾತಪಚ್ಛಾಯಾರಮಣಂ.

ಕಂ|| ಕಡುಬಿಸಿಲೊಳ್ ಕಡುಮಱೆಯೊಳ್ |
ಕಡುಗಾಳಿಯೊಳಿರಿಸಲಾಗದದಿರ್ದೊಡೆ ಕುತ್ತ ||
ಕ್ಕೆಡೆಯಕ್ಕು ಮದ[1]ಱಿನಿಂಬಾ |
ದೆಡೆಯೊಳ್ ಕಟ್ಟುವುದು ಕಲಿತ ಯೋಗ್ಯಾಲಯದೊಳ್ || ೭ ||

[3]ತುರಗದುರದುದ್ದ ಮಾಳ್ಪುದು |
ಚರಣಿಯ ನದಱೊಳಗು ಹಸ್ತವಿಸ್ತಾರಂ ಮ ||
ತ್ತೆರಡುಂ ಕೆಲದೊಳ್ ಮುಂ[2]ಡಿಗೆ |
(ಗೊ)ಗೆರಗಲುಚಿತವಾಗೆ ಮಾಡುವುದು ಮಂದಿರಮಂ || ೮ ||

ಖುರಮಂ ಸೋದಿಸುವುದು ಮಂ |
ದಿರದಿಂದಂ [4]ಪೊಱಗೆ ತೆಗೆದು ಸಮತಲನೆಲದೊಳ್ ||
ಪೊರಳಿಸುವುದೊರಸುವು[5]ದು ಪಗ |
ಲಿರುಳುಂ ಪರಿಚಾರಕಂಗೆ ನಿತ್ಯನಿಯೋಗಂ || ೯ ||

ತುರಗಮನನುಪಮಮಾಗಿರೆ |
ಪೊರೆದೇಱುವೆನೆಂಬ ಪುಣ್ಯಪುರುಷಂಗೆ ಮನೋ ||
ಹರಮಾಗೆ ಶಾಸ್ತ್ರಮಾರ್ಗಂ |
ತರದೊಳನುಕ್ರಮದೆ ಪೇಳ್ದೆನಯ್ದುಂ ಬಲಮಂ || || ೧೦ ||

ಅಯ್ದುಂ ಬಲಲಕ್ಷಣಂ

ಪರಿ(ರ)ದಿರೆ ನೆತ್ತರ್ ಮೆಯ್ಯೊಳ್ |
ಪರಿಪೂರ್ಣಂ ತೀವಿ ಪಾರ್ಶ್ವಗಳ್ಭೋಗಮುಂ ಕ |
ಣ್ಣೆರಡುಮಿನಿಸಿನಿಸು ಕೆಂಪೆಸೆ |
ದಿರೆ ವಾಜಿಗೆ ಮೊದಲ ಬಲಮಿದೆಂದಱಿವುದದಂ || ೧೧ ||

ಪಿರಿದುನ್ನತದಿಂ [6]ಮೆಯ್ಯ್ ಮೃದು |
ತರಮಪ್ಪುದು ನುಣ್ಪುವೆತ್ತು ಮಿಱುಮಿಱುಮಿಱುಗು ||
ತ್ತಿರೆ ರೋಮಂಗಳ್ ಕಕ್ಷಾಂ |
ತರಂ ಮಸೃಣಮಾಗೆ ತುರಗಕೆರಡನೆಯಬಲಂ || ೧೨ ||

[7]ಉರಮುಂ ಕೊರಲುಂ ಜಘನಾಂ |
ತರಮುಮುವತ್ಯುನ್ನತಂಗಳಾಗೆ ಮನಂ ಪೆ ||
ರ್ಚಿರೆ ದೆಸೆ ಮಸಗಿಂ ಕಿಱಿರುವ |
ತುರಗಂ ಭಾವಿಸುವೊಡಿಂತು ಮೂಱನೆಯಬಲಂ || ೧೩ ||

1 ದಱಿಂಬಟ್ಟೆಯೊಳ್ಕಟ್ಟುವುದು ಕಾಲವು. ಮದಱಿಗಿಂಸಾದೆಡೆ 2 ಮು(ಕ)ಂಡಿಗೆರಳುಚಿತಮಾಗಿ, ಮು(ಕ)ಂಡಿಗೆ ಶಿರದ್ರು(ಧ್ರು)ತಮಾಗೆ 3 ತುರಗದ ಮುಖದುದ್ದಮಂ ಮಾಡ್ಪುರಣಿ 4 ಪೊಱಗೆ ತೆಗೆವುದು ಸಿರದುದ್ದಮಾಗಿ ಸಮತಲದಿಂ, ಸಿರದುದ್ದಮಾಗಿ ಸಮತಲ 5 ದಂಬಾಯುರಿಳಿಂ ಪರಿಚಾರಕನಂತೆ 6 ನೋವುಷು 7 ಶಿರಮುಂ

ಕಂ|| ಸರ್ವಾಂಗದೊಳಂ ಮಾಂಸವು |
ಗುರ್ವಾಗಿರೆ ಪೆರ್ಚೆ ನೇಣನಂತತಿವೇಗಂ ||
ಪರ್ವಿ ಪರಿವುದು ಭರಕ್ಷಮ |
ಗರ್ವಿತನೆನಿಸುವ ಹಯಕ್ಕೆ ನಾಲ್ಕನೆಯಬಲಂ || ೧೪ |

ಆರೂಢವಿಷಮಗತಿಗಂ |
ಭೀರರವೋನ್ನತನುಮಧಿಕಸತ್ವರಿಪು ಸಂ ||
ಹಾರಸಮರ್ಥಂ ಶ್ರೀಗಾ |
ಧಾರಂ ಶ್ರೋಣಿತಮೆನಿಪ್ಪುದಯ್ದನೆಯಬಲಂ || ೧೫ |

## *ಷಡೃತು ಪೋಷಣಕ್ರಮಂ

ಅಂದಿಂದೆನ್ನದೆ ದೊರೆಕೊಂ |
ಡಂದದನಿಕ್ಕುಗೆ ಷಡೃತು ಪ್ರಭಾವದೊಳಂ ಪೇ ||
ಟಂದದಿನಾತ್ರಿಫಲೆಯನತಿ |
ಸೌಂದರದಿಂ ಮೂಱುತ್ತರಂಗಳುಂ ನೆಱೆವಿನೆಗಂ || ೧೬ |

### ೧ ವಸಂತರ್ತು

ವರಚೈತ್ರಂ ವೈಶಾಖಾಂ |
ತರಮೆರಡುಂ ತಿಂಗಳೊಳ್ ಸುರಾಪಾನದಿನಾ ||
ದರದಿಂ ತ್ರಿಫಲೆಯನೂಡುಗೆ
ತುರಗಕ್ಕೆ ರುಜಾಪಹಾರಮುಂ ಬಲಕರ(ಯುತ)ಮುಂ || ೧೭

### ೨ ಗ್ರೀಷ್ಮರ್ತು

ಜ್ಯೇಷ್ಠಾಷಾಡದೊಳಂ – |
...............ವಾರಿಯಂ ಫಲತ್ರಿತಯಮುಮಂ ||
ನಿಷ್ಠೆಯಿನಲಸದೆ ಕುಡೆ ಸಂ |
ತುಷ್ಟಮನಂ ಪುಷ್ಟಿವರ್ಧನಂ ಹಯಕಕ್ಕುಂ || ೧೮

### ೩ ವರ್ಷರ್ತು

ಸಾರಂ ಶ್ರಾವಣಭಾದ್ರಪ |
ದಾರಂಭದೊಳೆರಡು ವರಫಲತ್ರಯಮಂ ವಿ ||
ಸ್ತಾರದೆ ಕುಡುವುದು ಸದ್ಯಃ |
ಕ್ಷಾರದೊಳೊಡಗೂಡೆ ಹಯಕೆ ಬಲವರ್ಧನಮುಂ || ೧೯ |

*ಒಂದು ಪ್ರತಿಯಲ್ಲಿ ನೀರಾಜನವಿಧಿ ಇಲ್ಲದೆ.

೪ ಶರದೃತು

ಕಂ|| ಆಶ್ವಯುಜ ಕಾರ್ತಿಕಂಗಳೊ |
ಳಶ್ವಬಲಂ ವರ್ಧಮಾನಮುಪ್ಪನ್ನೈವರಂ ||
ಭಾಸ್ವತ್ತ್ರಿಫಲಾಕ್ಷೀರವು |
ನಶ್ವಕೆ ನಿಜೋತ್ಸಾಹವಾಗೆ ಕುಡುಗನುನಯದಿಂ || ೨೦ ||

೫ ಹಿಮಂತರ್ತು

ಮಾರ್ಗಶಿರಪುಷ್ಯ ಮಾಸಾಂ |
ತರ್ಗತದೊಳ್ ದಧಿಸಮನ್ವಿತಂ ತ್ರಿಫಲೆಯನೀ ||
ಮಾರ್ಗದೊಳೆ ಕುಡುಗೆ ಮಧುಫಲ |
ವರ್ಗಮನೊಸೆದಿಕ್ಕೆ ಮಾಳ್ಕುಮುದಿತೋದಿತಮಂ || ೨೧ ||

ವರಮಾಘಫಾಲ್ಗುಣಾಖ್ಯಂ |
ತರ ತೈಲದೊಳಾ ಫಲತ್ರಯಂಗಳನಾ ಬ ||
ಯ್ಗಿರುಳಿಕ್ಕುಗೆ ರುಜೆಯಾಗವು |
ತುರುಗಕ್ಕೆ ಹಿತೋಪದೇಶವಿಂತೀ ಕ್ರಿಯೆಯುಂ || ೨೨ ||

ಪಿತ್ತಂ ಬೇಸಗೆಯೊಳ್ ಪೆ |
ರ್ಚುಗತ್ತಿ ಕರ್ಗಂ ತುರಗಕಾಶ್ವಯುಜಕಾರ್ತಿಕದೊಳ್ ||
ಪಿತ್ತಂ ಪೆರ್ಚುಗುಮಂತದು |
ಕುತ್ತಕ್ಕೆಡೆಯಾಗಿ ಪೀಡೆಗೆಯ್ಗುಂ ಹಯಮಮಂ || ೨೩ ||

ಪಾತ................ಪರುಷೋ |
ಪೇತ ಶರತ್ಕಾಲದೊಳ್ ಪ್ರಮಾಣಮನಱಿದು ||
ತ್ವಾತಾನಾಗತ ಬೋಧೋ |
ಪಾತ ಪ್ರತಿಷೇಧಮಾಗೆ ಕುಡುವುದು ಘೃತಮಂ || ೨೪ ||

ಬಡವಾದೊಡಮುಧ್ವಾನದೊ |
ಳಡಸಿ ತಗುಳ್ದು ನೆಱೆಸೊಂದೊಡಂ ಕಲಹದೊಳೇ ||
ರ್ಪಡೆದೊಡಮುದರ್ಕ ಕುಡುವುದು |
ಗುಡದುಗ್ಧೋದಕಮನೇೞುದಿವಸಂಬರೆಗಂ || ೨೫ ||

ನೀರೂಡುವಂದದಿಂದಂ |
ಕ್ಷೀರಮನೂಡುವುದು ಲವಣಮಿಕ್ಕಿದ ದಿವಸಂ ||
ಕ್ಷೀರಮನೂಡಲ್ವೇಡಾ |
ಕ್ಷೀರಗುಡಕ್ಷೇತ್ರದೊಳಗಯುಕ್ತಂ ಲವಣಂ || ೨೬ ||

ಕಂ|| ಅನುಲೋಮವಾಗಿ ವಾಜಿಗೆ |
ಜನಿಯಿಸೆ ಬಲಮೆರ್ದೆಯ ಲದ್ದಿ ಗುತ್ತಂ ಪಿರಿದ ||
ಪ್ಪಿನವಲ್ಲಿ ಕಜ್ಜಗಟ್ಟುವು |
ದನುನಯದಿಂ ಕುಡುಗೆಯೆಣ್ಣೆಯಂ ನವರಸಮಂ || ೨೭ ||

ಎಳದಳಿಸಿ ಕರಿಯ ಕೆಯ್ಯೊಳ್ |
ಬೆಳೆದೊಱಗಿದ ಕಡಲೆಯುತ್ತಮಂ [1]ಕಿಡಿಪಕೆ ||
ಯ್ಯೊಳಗಾದ ಸಾರವೋಡಿದ |
ಬೆಳರ್ತ ಕಡಲೆಗಳನಿಕ್ಕಲಾಗದಯುಕ್ತಂ || ೨೮ ||

ಆವಾವನಾಡೊಳಂ ಮ |
ತ್ತಾವುದು ದೇಶದೊಳೆ ಮೇವನಿಕ್ಕುವರಱಿವರ್ ||
ಭಾವಿಸಿ ಮತ್ತಾ ನಾಡೊಳ |
ಗಾವಸ್ತುವ ನಱಿದು ಕುಡುಗೆ ದಿವ್ಯೌಷಧಮಂ || ೨೯ ||

(ಸರ್ವರುಜೆಗೌಷಧಿ)

ಉ|| ವಾರುಣಿ ಲೊಕ್ಕಿ ಕಟ್ತಿಗಿರಿ ಬೇವೊ(ವಿ)ಳುಕಂ ಕುಟಜಂ ಕಟುತ್ರಯಂ |
ದಾರುವಿಳಂಗ ಮಿಂಗು ಪಟಲಂ ರವಿಭಕ್ತ ನಪೂರ್ವ ಚಿತ್ರಕಂ ||
ಜೀರಗೆಯುಪ್ಪು ಬೋಟತರ ಮಿಂಗುಳವಾಗುಳಿಚ(ಬ)ಂಗಳಂ ಯುವ |
ಕ್ಷಾರಸಮೇತ ಮಿಕ್ಕುವುದು ವಾಜಿಗೆ ಸರ್ವರುಜಾಪಹಾರಕಂ || ೩೦ ||

ಪಿಂಡ ಸೇವನೆ

ಮ|| ಜನಿತೋತ್ಸಾಹಮನೂನಮಗ್ನಿಬಲಮಾರೋಗ್ಯಂ ನಯಂ ಪುಷ್ಟಿವ |
ರ್ಧನಮಕ್ಕುಂ ಕ್ರಿಮಿಕೀಟ ಗುಲ್ಮ ಮುಖರೋಗಂ ಶ್ವಾಸಶೂಲೋಗ್ರವೇ ||
ದನೆ ವಾತೋತ್ಕಟ ರಕ್ತ ಪಿತ್ತ ಕಫ ದೃಷ್ಟಿಸ್ತಂಭನ ದ್ರೋಣಿಕಾ |
ಕ್ಷಿನಖವ್ಯಾಧಿಗಳೆಲ್ಲಮಂ ಕಿಡಿಸುಗುಂ ಪಿಂಡಂ ಸದಾಸೇವಿತಂ || ೩೧ ||

ಕಂ|| ತವಸಿಯ ತೊವಲೊಳಗೆ ಪುನ |
ರ್ನವಿಯುಮನಾಕಟ್ತಿಗಿರಿಯುಮಂ ಲೊಕ್ಕಿಯುಮಂ ||
ಸವನಾಗಿ ಕೂಡಿಕೊಳ್ವುದು |
ಲವಣಸಮೇತಂ ತ್ರಿದೋಷಹರಣಂ ಪಿಂಡಂ || ೩೨ ||

ಬರಿವದಣೆ ಲೊಕ್ಕಿ ಲೋಯಿ(ಹಿ) |
ಸರ [2]ಮಣಿಲೆ ಗುಳೂಚಿ ಪಿಪ್ಪಲಿಹುಲಿಗಿಲ್ ವಿಷನಾ ||
ಗರಲಶುನಂಗಳೊಳುಪ್ಪಂ |
ಬೆರಸುಗೆ ಪವಣಱಿಗೆ ಪಿಂಡಮಾರೋಗ್ಯಕರಂ || ೩೩ ||

---

1 ಕಿಡಿಯಪಲ್ಲೊಳಗಾದ 2 ಮಣಿಶಿರಯು ಬೇವು ಪಿಪ್ಪಲಿ ಪುಲಿಗಿಲ್‌ವಿಷನಾ

ಕಂ|| ಒರ್ಪಲವುಪ್ಪಂ ತ್ರಿಕಟುಕ |
ಮೊರ್ಪಲವುಂ ಬೇವಿನೆಲೆಯುಮಮಂ ಸಮಯುಕ್ತಂ ||
ಬರ್ಪಂತಾಗಿರೆ ತುಳಿದು ಸ |
ಮರ್ಪಿಸುವುದು ದಿವ್ಯಪಿಂಡಮಂ ಕಫಹರಣಂ || ೩೪ ||

ಸಾಮುದ್ರಂ ಗರ್ದುಗಿನ ಕೊನೆ |
ಸಾಮಾನ್ಯಂ ಸರ್ವರೋಗಹರಮಗ್ನಿಬಲೋ ||
ದ್ದಾಮಂ ಸತ್ವಯುತಂ ಸು |
ಕ್ಷೇಮಾರೋಗ್ಯಪ್ರದಾಯಿ ದಿವ್ಯಂ ಪಿಂಡಂ || ೩೫ ||

ಇಂಗಳದ ಬೇರ ಪುಡಿಗೆ ಸ |
ಮಂಗೂಡಿದ ಲವಣದೊಡನೆ ಕಟುಕತ್ರಯಮಂ ||
ಸಂಗಡಿ(ಣಿ)ಸಿ ಕೆಮ್ಮುತಿರ್ದ ತು |
ರಂಗಮಕಿಕ್ಕಲ್ಕೆ ನಿರುಜನಕ್ಕುಮವಶ್ಯಂ || ೩೬ ||

ಆಮಳಕದನಿತನಿಕ್ಕುಗೆ |
ಸಾಮುದ್ರಸಮೇತಮರ್ಕಮೂಲಮನದು ಸಂ ||
ಧಾಮವಿನಾಶನಮರುಣೋ |
ದ್ದಾಮಂ ತುರಗಕ್ಕೆ ಪಿಂಡಮಭಿನವಚಂದ್ರಾ || ೩೭ ||

ಆಲದ ಅತ್ತಿಯ ಬಸಿರಿಯ |
ಪಾಲೇಱಿದ ಕೊನೆಯನುಡಿದು ಮದಮಿಶ್ರಿತದಿಂ ||
ದಾಲೋಚಿಸದಿಕ್ಕುವುದಾ |
ರೇೞುದಿನಂ ತಱದೆ ಹಯಕೆ ಖಾಸವಿನಾಶಂ || ೩೮ ||

ಚಿತ್ರಕ ಘನಾಗಮಂ ಕಟು |
ಕತ್ರಿತಯಂ ತ್ರಿಫಲೆಯಿಂತಿವೆಲ್ಲಮನರೆದೇ ||
ಕತ್ರಯಮಂ [1]ಕುಡೆ ಹಯಖಾ |
ಸತ್ರಯಮಂ ಕಿಡಿಸುಗೆಂದನಭಿನವಚಂದ್ರಂ || ೩೯ ||

ತವಸಿಯ ಗರ್ದುಗಿನ ಪುಲಿಗಿಲ |
ತೊವಲಳಿಲೆ ವಿಳಂಗ ದಹನ ಮಾಗಧ ಮೆಂದೀ ||
ಬಿವ ನೊಡನೆ ಕೂಡಿ ಬೆಲ್ಲಂ |
ಸವನಾಗಿರೆ ಬೆರಸಲಗ್ನಿದೀಪನಪಿಂಡಂ || ೪೦ ||

1 ಕುಡಿಸೆ ಕುದಿರೆಗೆ ಖಾಸೆ

ಕಂ|| ಮರಿಚಂ ಸುಸೈಂಧವಂ ನಾ |
ಗರಮೊಂದ(ಲ)ಂ ಲೊಕ್ಕಿ ಚಿತ್ರಮೂಲಂ ನಿಂಬಂ ||
ಬರಿವದ(ಣೆ)ನೆ ಲವಣಮಿವನಳೆ |
ಬೆರಸಿಕ್ಕುಗೆ ಯಗ್ನಿದೀಪನೀಯಂ ಪಿಂಡಂ || ೪೧ ||

ವಾತಮನುಪ್ಪುಂ ಕಟು(ಳೆ)ಯುಂ |
ಘಾತಿಸುಗುಂ ಪಿತ್ತನಾಶಿ ಕಟುಕತ್ರಿತಯು ||
ವ್ರಾತಂ ಶ್ಲೇಷ್ಮಮುಮುಪಮಾ |
ತೀತಮಿದೆನೆ ಕಟುಕರಸಕಷಾಯಂ ಕಳೆಗುಂ || ೪೨ ||

ದ್ರಾಕ್ಷೆ ಮಧುಖಂಡಶರ್ಕರೆ |
ಗೋಕ್ಷೀರಂ ಯಷ್ಟಿಮಧುಕ ಮಿವು ಪಿತ್ತಹರಂ ||
ರಕ್ಷಿಸುಗುಂ ವಾಜಿಗಳನು |
ಪೇಕ್ಷಿಸದಿಕ್ಕುವುದು ರಕ್ತಪಿತ್ತಾಪಹರಂ || ೪೩ ||

ಇಂಗಿನೆಲೆ ಮುಸ್ತೆ ಯುಳಲೆ ಲ |
ವಂಗಂ ಬಜೆ ಚಿತ್ರಮೂಲಮತಿಬಜೆ ಸುರ(ದ್ರು)ದಾರ್‍ ? ||
ಶೃಂ(ತಂ)ಗಿಯ ಬೇರುಂ ತಿಗುಡೆ ವಿ |
ಳಂಗಂ ಪಿಪ್ಪಲಿಯೆ ಮರಿಚಸೈಂಧವಲವಣಂ || ೪೪ ||

ಎರಡುಂ ಕಪ್ಪುರಂ ಕೊತ್ತುಂ |
ಬರಿ ಸರಳಂ ನಾಗಪುಷ್ಪಮಿಂತಿವನೊಂದಾ ||
ಗಿರೆ ಕೂಡಿಮಾಡಿ ಬೆರಸುಗೆ |
ನಿರುತದಿನದ ನಾಮ್ಲವರ್ಗದೊಳ್‍ ಬೇಟ್ವಿನಿದಂ || ೪೫ ||

ರಸಭರಿತಮಾತುಳುಂಗಂ |
ರಸದಾಳಿಂಬದ ಬೀಜ ನೆಲ್ಲಿಯುಂ............ ||
......................ಸದೊ |
ಳ್ಪಸರಿಸಿ ಕಲಸುವುದಱಿಂದೆ ದಿವ್ಯಂ ಪಿಂಡಂ || ೪೬ ||

ಬಿಸು(ಸಿ)ನೀರೊಳ್‍ ಕುಡೆ ವಾತಂ |
ಪ್ರಶಮಿಸುಗುಂ ತಣ್ಪನುದಕದಿಂದಂ ಪಿತ್ತ ||
ಪ್ರಶಮನ ವಕ್ಕುಂ ಶ್ಲೇಷ್ಮಂ |
ಕಸಾಯ ಗೋರಸದೆ ಕ್ಷೀರರಸದಿಂ ಕಿಡುಗುಂ || ೪೭ ||

ಎರದ ತನಿವಣ್ಣು ಗುಡ ಮಧು |
ಸರಳಂ ಪೊಸವೆಸಱು ಬೆಸಲೆ ಬಾಳದ ಬೇರಿ ||
ಕ್ಷುರಸಂ........ಪಿತಿಸಾರಂ |
ಪರಿತಾಪಂ ದಾಹರೋಗನಿಶ್ಶೇಷಹರಂ || ೪೮ ||

ಕಂ|| ಧಾತುಗಳೇೞುಂ ದೋಷ |
ವ್ರಾತಂಗಳ್ ನೂಱುಮಾತ್ಮ(ತ್ರ)ಸಂ(ಸ್ಥಾ)ಶಾಪದಿ(ದೆ)ಮೂ ||
ಸೂತಿಸಿ ಕನಲ್ದು ತುರಗ |
ವ್ರಾತಂ ಬಡವಕ್ಕು ಮಿಂತು ಪಲವುಂ ತೆಱದಿಂ || ೪೯ ||

ವಿದಿತಂ ಸಾಮುದ್ರಿಕವುಂ |
ಸದಮಲತಕ್ರಮುಮನೊಂದುತಿಂಗಳ್ವರಮಿ ||
ಕ್ಕಿದೊಡೆ ಮಱೆಗಾಲದೊಳ್ ಬಡ |
ಗುದುರೆಗೆ ಬಲಮಕ್ಕುಮೆಂದನಭಿನವಚಂದ್ರಂ || ೫೦ ||

ಲಶುನಮು ಮೋವುಮನುಪ್ಪಂ |
ಮೊಸರುಮನೊಡಗೂಡಿಕೊಂಡು ಬಡಗುದುರೆಗೆ ಸಂ ||
ಕಿಸದೊಂದುಪಕ್ಷ ಮಿಕ್ಕುಗೆ |
ವಿಶೇಷದಿಂ ಫಲಮನೀವುದದು ನಿಶ್ಚಯದಿಂ || ೫೧ ||

ಅನಲಂ ಗುಳೂಚಿ ಮೊಸರೆ |
ಳ್ಳಿನಿತುಮನೊಡಗೂಡಿ ಕೊಡುವುದಿರ್ಪ್ಪತ್ತೊಂದುಂ ||
ದಿನವರೆಗಂ ಕುದಿರೆಗೆ ಬಲ |
ಮನುಲೋಮಂ ಪೆರ್ಚೆ ಪೆರ್ಚುಗುಂ ಕ್ಷೀಣಂಗಳ್ || ೫೨ ||

ಕಲ್ಗುಪ್ಪು ಕೊಗ್ಗಿ ಮೊಸರಿವ |
ನೆಲ್ಲವನೊಡಗೂಡಿ ಕೊಂಡು ಶೋಷಣವಿಧಿಯಿಂ ||
ಬಲ್ಲವರಿಕ್ಕುಗೆ ಬಡವುಂ |
ಬಲ್ಲಿದುವಕ್ಕುಂ ತ್ರಿಸಪ್ತ ರಾತ್ರಾಂತರದೊಳ್ || ೫೩ ||

ಒಕರ್ಳ ಪಾಲೊಕ್ಕುಳಮೊಸ |
ರೊಕ್ಕರ್ಳ ಕುಂಬಳದ ಕುಸುರಿಯೊಳ್ ಸಮಯುಕ್ತಂ ||
ಬಕರ್ ಮಿದೆಂಬಂತಾಗಿರೆ |
ತೋಕೆರ್ಯಿ(ಯೆ)ನಿಱದಿಂಗನಿಕ್ಕೆ ಮತ್ತನುನಯದಿಂ || ೫೪ ||

ಅದಱೊಳಗೆ ಶುಂಠಿಯುಂ ಬೆ |
ಲ್ಲದರಸಮುಂ ಘೃತಮನುಳ್ಳಿಯುಂ ಸಾಸಿವೆಯುಂ ||
ಪದನಱದು ಕೂಡಿ ಕುಡುವುದು |
ಕುದಿರೆಗೆ ತಾಂ ಮೂಱುಸಪ್ತಹ(ರ)ಂ ಪೋಪಿನೆಗಂ || ೫೫ ||

ಜವೆಯುಂ ಬಾ(ಬಾ)ಣಂಗಟ್ಟುವ |
ಡುವಿಯುಂ ಕಳೆದಿಕ್ಕಿ ಮಾಡಿ ಕಟ್ಟುಗೆ ಪೆಸಱಂ ||
ತೊವರಿಯನುದುರ್ವುಮಂ ಗೋ |
ದುವೆಯುಮನಿಕ್ಕುವೊಡೆ ತೆಗಸಿಕಟ್ಟುವುದು(ವೊಡು)ಚಿತಂ || ೫೬ ||

ಕಂ|| ನನೆಯಿಕ್ಕಿದ ಕಡಲೆಯು ತುರ |
ಗನಿಕಾಯಕ್ಕಱದು ಕಟ್ಟುವುದು ಮಲೆಯುಂ ದು ||
ರ್ದಿನಮುಂ ಗಾಳಿಯು ವಂ(ಮಾ)ದಂ |
ದಿನ ದೆವಸಂ ನೆಗಪಿ ಕಟ್ಟುವುದು ಕರಮುಚಿತಂ || ೫೭ ||

ನಾಂದುವನಡಿಗಟ್ಟಂ ಪುಲು |
ತಿಂದುವ ನಡಯೊತ್ತಿ ಬೆಂದುವಂ ಬೂರಣಮ(ದಿ)ಂ ||
ಕಂದಿದುವಂ ಮೊಳೆವೋದುವ |
ನೆಂದುಂ ಕಟ್ಟಲ್ಕೆ ವೇಡ ಖಾ(ಬಾ)ಣದಿಗಳಂ || ೫೮ ||

ಬರಗೆಳ್ಳು ಕೋಲೆ ಪಾರಕು |
ವೆರಸಗಸೆ ಕುಸುಂಬೆ ಕಲವೆ ನೆಲ್ ಸಾವೆಗಳುಂ ||
ತುರಗಕ್ಕಹಿತಂ ಬಲಸಂ |
ಹರಣಂಗಳ್ ಖಾ(ಬಾ)ಣವಿಧಿಯಿನಭಿನವಚಂದ್ರಾ || ೫೯ ||

ನಿರ್ಮಲಿನಮಪ್ಪ ಹರಪಿನ ? |
ಪೆರ್ಮಡುಗಳ ತೊಱೆಯ ದೀರ್ಘಿಕೆಯ ವಿಚಿ ||
ತ್ರಾರ್ಮಿಕೆಗಳ ಸಂಚಲಿಸುವ |
ನೀರ್ಮಾನಸಲಹರಿ ಸರ್ವ ದೋಷಾಪಹರಂ || ೬೦ ||

ಕದಡಿದುದೆಲೆಕೊಳೆಯಿಂ ಪುಲಿ |
ತುದು ಪಾವಸೆ ಪಂಕವತಿಕಲಂಕಂ ಕ್ರಿಮಿ ಕಾ ||
ಸಿದ ತಾಣಮುಲ್ಲಮೆನೆ ಪೊ |
ಲ್ಲದು ತುರಗಕ್ಕೆ ಕೂಪವೆಂಬುದುಂ ವಿಷಕೂಪಂ || ೬೧ ||

ಮಂದಾಗ್ನಿಯಕ್ಕು ಮುದಕ(ಕ್ಕ)ದೆ ? |
ಯಿಂದಮನಾಹಾರದಿಂದೆ ಧಾತುಗಳೇಲುಂ ||
ಬಂದಿರ್ಕು ಮುದರ(ಪಾ)ವಕ |
ದಿಂದಂ ಕುತ್ತಂಗಳೆರಡು ತೆಱದಿಂದಕ್ಕುಂ ||೬೨ ||

ದುಷ್ಟಾಂಬುಪಾನದಿಂದಂ |
ಕಷ್ಟಂ ಖಾ(ಬಾ)ಣದಿನನಿಷ್ಟವಾತಪಶಯದಿಂ ||
ಭ್ರಷ್ಟಾರೋ(ಲೊ)ಹ[ಕ] ನಿಂದು |
ತೃಷ್ಟಾಶ್ವಂ ಕ್ಷೀಣವಾಗಿ ರುಜೆಯೊಳ್ ನವೆಗುಂ || ೬೩ ||

ಸ್ನಾನಾಹಾರಾಗಾರವಿ |
ಧಾನದೊಳಂ ಖಾನ(ಣ)ಪಾನ ವಯಸಾರೂಢ ||
ಸ್ಥಾನದೊಳಂ ತುರಗಮನವ |
ಮಾನಿಸದಾರಯ್ಯೆ ಪಲವುಕಾಲಂ ಬಾಳ್ಗುಂ || ೬೪ ||

ಕಂ|| ತುರುಗಕ್ಕೆ ಗಂಧಮಾಲ್ಯಾ |
ಭರಣಾರ್ಪಣ ಖಾನಪಾ(ಣ)ನ ಭೋಜನಶಯನಾ ||
ದರಮಂ ಮಾಡುವ ಪತಿಗಿ(ಯಿ)ರ |
ದರಿಯಂ ಮಡಿಯಿಸುಗುಮಸಮಸಮರಾಂಗಣದೊಳ್ || ೬೫ ||

ಕಡುಗಾಳಿಯೊಳ್ ದವಾನಲ |
ನೊಡಗೂಡಿದ ತೆಱದೆ ವಹ್ನಿಯೊಳ್ ತುರಗಮೊಡಂ ||
ಬಡೆ(ಡ)ದನ್ಯರಿಪುಬಲಾಬ್ಧಿಯ |
ಕಡೆವರಮೊಟ್ಟೈಸಿ ಗೆಲ್ಗು ಪರ(ರಿಪು)ಮಂಡಲಮಂ || ೬೭ ||

ಮುನ್ನನುವಾಹಿತನಂ ತೋ |
ರ್ಪುನ್ನತಿಗಿಡೆ ಬಡಿದ ಕಾಲ(ಳ)ದಂಡಕ್ಕೆಸೆ(ದ)ವಾ ||
ತನ್ನೋಯಿಸಿ ಪೊರೆಯದ ಪತಿ |
ಯನ್ನೆಸೆ(ಯದು)ಗುಂ ವಾಜಿ ಸಮರಭೂಮಿಯೊಳಿಂದುಂ || ೬೮ ||

ಮ|| ಅತಿದೂರಂ ಪಯಣಕ್ಕೆ ಬೇಟೆಗೆ ವಿನೋದಾರ್ಥಕ್ಕೆ ಸೆಂಡಿಗೆ ಪೂ |
ಜಿತಕಾರ್ಯಕ್ಕೆ ಮಹಾಹವಕ್ಕೆ ಭಟರುಂ ಗಂದೇಭಮುಂ ಸುತ್ತಿ ಮು ||
ತ್ತಿ ತಱುಂಬಿರ್ದ ಪದಕ್ಕೆ ಚಿಂತಿತಮನೋವಾಕ್ಕಾಯ ಕರ್ಮಂಗಳೂ |
ರ್ಜಿತಮಪ್ಪಂತು ನಿಜಾಧಿಪಂಗೆ ತುರಗಂ ಮಾಳ್ಕುಂ ನಿಜೋತ್ಸಾಹಮಂ || ೬೯ ||

ಚಂ|| ಕುದಿರೆ ನಿಜಾಧಿಪಂಮುಳಿದು ಚೋದಿಸೆ ಮಾರ್ಬಲದೊಡ್ಡನೆಬ್ಬಿ ತೀ|
ವಿದ ತೊಱೆಯಂ ತಗುಳ್ದರಿಮಯಂ ನಡೆ ಪಾಯ್ದು ಕಱುತ್ತುಮಟ್ಟಿದು ||
ರ್ವಿದ ವಿವಿಧಾಯುಧಂಗಳೊಳಗೊಂದನೆ ಸೈರಿಸಲಾಱದಲ್ತೆ ಸಿಂ |
ಹದ ಮಱಿ ಮೇಘಘರ್ಜನೆಗೆ ಸೈರಿಸದಂತೆ ಕಶಾಭಿಘಾತಮಂ || || ೭೦ ||

ಕಂ|| ಶ್ರೀಯಂ ಮೆಱೆಯೆಲ್ ನೆಲನಂ |
ಕಾಯಲ್ ಮನಮೆಯ್ದೆ ಜಯಮನೆಯ್ದಲ್ ಬಗೆಯಂ ||
ಸೋಯಲ್ ಬಯಸುವವಂ ತಾ |
ನಾಸೇಯ ತುರಗಮನೆಯ್ದೆ ಪೊರೆವುದು ಭೂಪಂ || ೭೧ ||

ಪೂಜಿಸುವುದು ನಿಚ್ಚಂ ನೀ |
ರಾಜಿಸುವುದು ಪರ್ವದಂದು ಜಯಮಂಗಲಮಂ ||
ಬಾಜಿಸುವುದು ಶುಭಲಕ್ಷಣ |
ವಾಜಿಗಳಂ ನೋಂಟ್ಪುದುದಯ ವೇಳೆಯೊಳರಸಂ || ೭೨ ||

ಸ್ನಾನಂ ಪಾನಂ ಖಾನ(ಣ)ಮ |
ನಾನೇಯಾಶ್ವಕ್ಕಮರಸ ನಾರಯ್ಯದೆ ತಾಂ ||
ಸ್ನಾನಂ ಭೋಜನಮಂ ತಾ |
ನೇನಂ ಮಾಡಲ್ಕೆವೇಡ ವಿಜಯಮನೊಲ್ವಂ || ೭೩ ||

ಕಂ|| ವಾಜಿಯಿ ಮೊದಲಾವಿಜಯ |
ಕ್ಕಾಜಿಯೊಳರಸಂಗೆ ಬುದ್ಧಿವಂತಂಗದಱಿಂ ||
ವಾಜಿಗಳನೆಯ್ದೆ ಪೊರೆವುದು |
ಪೂಜಿಸುವುದು ವಿಜಯಲಕ್ಷ್ಮಿಯಂ ಬಯಸುವವಂ || ೭೪

ಕ್ರೂರಾಯುಧಂಗಳುರ್ಚೆ ವಿ |
ದಾರಿತಮಪ್ಪೊಡೆಯು(ಡಮು)ಮಂತೆ ಬೆನ್ನೊಳ್ ಮುಂ ಭ ||
ರ್ತಾರನಿರೆ ಕ(ತ್ರ)ಳ(ಳಿ)ಯದ ಸಾವನು |
ದಾರಹಯಂ ಪರಿಕು(ಗು)ಮರಿಬಲಾಂಭೋನಿಧಿಯೊಳ್ || ೭೫ ||

ಅರಸಂಗೆ ಶೀಘ್ರಮಪ್ಪಾ |
ತುರಗಗಜ..........................................ಳ್ ||
ಪರಿದೆಯ್ದೆ ಮಾಳ್ಪಿಕಜ್ಜಂ |
ಕರಿಗಂ ಕಾಳಾಳ್ಗ ಮೇಕೆ ಮಾಡಲ್ಕಕ್ಕುಂ || ೭೬ ||

ಆಷಾಢೆ ಮಾಸದಂದಾ |
ಶೇಷಿಯ ಕರ್ಕಟಕವಾರಿ ತುರಗದ ಮೆಯ್ಯಂ ||
ಲೇಪಿಸಿದಂತರಿಸಿನಮಂ |
ಭೂಷಣಮಂ ಪೂವಸಹಿತ ಮೆತ್ತುಗೆ[1]ತುರಗಂ || ೭೭ ||

ಮಧುಪಾನೋತ್ಸವದೊಳ್ |
ವಿಧುಮುಖಿಯುರಗಾಡಿ ಕಾಮುಕರ್ಕಳ ಮನಮಂ ||
ಮಧುಪಾನದೊಳಲೆವಂತಿರೆ |
ಮಧುಪಾನೋತ್ಸವ ತುರಗಮುಲೆಗುಂ ಮನಮಂ || ೭೮ ||

(ಋತುಮಾಸ(ನೆ)ಪಿಂಡಕ್ಷಮು)

ಪ್ರತಿಪಾನಮೆಂಬುದಾಱುಂ |
ಋತುಗಳೊಳಂ ಬೇಱೆ ಬೇಱೆ ದಿವ್ಯೌಷಧಸಂ ||
ಯುತದೊಳ್ ಕುಡುವುದು ತುರಗಂ |
ಘೃತಮು ಂಡು ಬಲಸ್ಥನಕ್ಕು ಮತ್ತನುನಯದಿಂ || ೭೯ ||

ಪುಳಿಮಧುರಮುಪ್ಪುತಿಕ್ತಂ |
ಗಳೆಂದು ತೊವರೆಂದು ಕಟುಕಮೆಂದಪ್ಪುವು ಕೊ ||
ಳ್ಗಳನಱುದು ಗಂಧಸಹಿತಂ |
ಬಳಯುತಮಂ ಕುಡುಗೆ ಹರಿಗೆ ಪಾನಾದಿಗಳಂ || ೮೦ ||

1 ಮೆಯ್ಯ

ಕಂ॥ ಕದ(ಡಿ)ದುದು ಪುಟಿತುದು ಬಂ।
........ದುಗಟ್ಟಿತು ಪಲವುದೆವಸಮಿರ್ದುದು ಕೊಳೆನಾ॥
ರ್ವುದು ರುಚಿಯಲ್ಲದ ಪಿಂಡಂ।
ಕುದಿರಿಗೆ ತಾಂ ಪೊಲ್ಲದೆನಿಪ ಕವಳಮನಿಷ್ಟಂ ॥ ೮೧ ॥

ಮನಕೆವರೆ ನೋಡಿ ಮುನ್ನದ।
ನನುಭವಿಸಿದ ಗಂಧಮಱಿವ ಸವಿಯಱಿವವರಾ॥
ಗನುನಯದಿಂ ತರಿಸುಗೆ ಸಂ।
ಜನಿತ ಸುಖಾವಹಮುಮಪ್ಪಬಲಮಂ ಬಲಮಂ ॥ ೮೨ ॥

ಮಧುಕಂ ಮುಷ್ಟಿಗೆ ಸಕ್ಕರೆ।
ಮಧುಜೀವನಿ ಪದ್ಮಕಂಗಳಂ ತಳ್ತೊಳ್ಮಾ॥
ಗಧಸಹಿತಂ ಪ್ರತಿಪಾನದ।
ವಿಧಾನಮಂ ಶರದದಂದು ಮಾಳ್ಕನುನಯದಿಂ ॥ ೮೩ ॥

ಹಿಪ್ಪಲಿ ಕೊತ್ತುಂಬ(ರಿ)ಲಿ ಸದ।
ಗುಪ್ಪೆ ವಿಳಂಗಾಗ್ನಿ ಲೋಧ್ರ ಸಿಂಧೂದ್ಭವಮಂ॥
ತಪ್ಪದೆ ಸಮಮಾಗಿರೆ ಯೋ।
ಜಿಪ್ಪುದು ನುತಶಿಶಿರಋತುವಿನೊಳ್ ಪ್ರತಿಪಾನಂ ॥ ೮೪ ॥

ಮಾಗಧಲೋಧ್ರಂ ಮಾಕ್ಷಿಕ।
ನಾಗರಮುಸ್ತಾ ಪ್ರಿಯಂಗುವಂ ಕಣ್ಣೊಳ್ ಸಂ॥
ಯೋಗಂಗೆಯ್ವುದು ಹೇಮಂ।
ತಾಗಮದೊಳ್ ಕುಡೆ ಮನೋಹರಂ ಪ್ರತಿಪಾನಂ ॥ ೮೫ ॥

ಆಲ್ಲಂ ಪ್ರಿಯಂಗು ಲೋಧ್ರಂ।
ಬೆಲ್ಲಮವುಂಗುರುಮಮಧುಕ ಸಂಮಿಶ್ರಿತಮಂ॥
ಕಳ್ಳಂ ಪ್ರಭಾತದೊಳ್ ತ।
ಳ್ವಿಲ್ಲದೆ ಮಾಳ್ಪುದು ನಿದಾಘದೊಳ್ ಪ್ರತಿಪಾನಂ ॥ ೮೬ ॥

ಮಾಗಧ ತೈಲಂ ಸೈಂಧವ।
ನಾಗರ ಸುರದಾರುಗಳ್ ಸುರಾಪಾನದ ಸಂ॥
ಯೋಗದೊಳಶ್ವಂಗಳ್ಗೆ ಘ।
ನಾಗಮದೊಳ್ ಕುಡೆ ಮನೋಹರಂ ಪ್ರತಿಪಾನಂ ॥ ೮೭ ॥

ಕಂ|| ಹಿಪ್ಪಲಿ ಸಿಂಧೂತ್ಥಂ ಸದ |
ಗುಪ್ಪೆ ಮರಿಚಮಗ್ನಿ ನಾಗರಂ ವಾಸಿತದಿಂ ||
ದೊಪ್ಪುವ ಕಳ್ ಪ್ರತಿಪಾನಕ |
ಮಪ್ಪುದು ತುರಗಕ್ಕೆ ವರುಷಋತುವರ್ತತದೊಳ್ || ೮೮

ಭಾಷಾವಿದರುಂ ಬುಧರುಂ |
ದೋಷಪರೀಕ್ಷಕರುಮಿಂತು ಭಾವಿಸುವುದಿದಂ ||
ಪೋಷಣವಿಧಿಯಂ ತುರಗವಿ |
ಭೂಷಣಮಂ ಚಂದ್ರವರ್ಮಕೃತಿಸಪ್ತಕಮಂ || ೮೯

ಇಂತು ಸಪ್ತಮಾಧ್ಯಾಯಂ*

*ಒಂದೆರಡು ಪ್ರತಿಗಳಲ್ಲಿ "ಅಷ್ಟಮಾಧ್ಯಾಯಂ" ಎಂದಿದೆ.

# ಅಷ್ಟಮಾಧ್ಯಾಯಂ

## ನೀರಾಜನವಿಧಿ

ಕಂ|| ನೀರಾಜನವಿಧಿಯಂ ವಿ |
ಸ್ತಾರದೆ ಮಾಡುವುದರಾತಿಸಂಕುಲಮಂ ಸಂ ||
ಹಾರಿಸಲುಂ ವಿಜಯವನವ |
ಧಾರಿಸಲುಂ ನೃಪತಿ ಬಗೆವೊಡುದಿತೋದಿತಮಂ || ೧ ||

ಆಶ್ವಯುಜ ಶುದ್ಧ ಬಿದಿಗೆಯೊ |
ಳಶ್ವಾನೀಕಕ್ಕೆ ರಕ್ಷೆಯಿಕ್ಕುವುದು ಧರಾ ||
ಧೀಶ್ವರನುದಾರಧೀರಗು |
ಣಾಶ್ವಕೆ ಜನಿತೋತ್ಸಹದೆ ಮಹಾಮಂಗಲಮಂ || ೨ ||

(ಮಹಾನವಮಿಯ ಕ್ರಮಂ)

ಆಯತ ಸಂಸ್ಥಾನಬೃಹ |
ತ್ಕಾಯನ ನತಿಧವಲವರ್ಣನಂ ದ್ವಿಜನಂ ದೀ ||
ರ್ಘಾಯುವ ನುತ್ತಮಜವನಂ |
ತೋಯಧರಸ್ವನನನಮಳಮುಖತಾಲುಕನಂ || ೩ ||

ಲಕ್ಷಣಸಂಪನ್ನನನವ |
ಲಕ್ಷಣರಹಿತನನುದಾರತೇಜೋನಿಧಿಯಂ ||
ಶಿಕ್ಷಿತನಂ ಚತುರಸ್ರವಿ |
ವಕ್ಷಿತನಂ ಸಕಲಜನಮನೋರಂಜಕನಂ || ೪ ||

ಉದಿತೋದಿತನಂ(ದೇ)ರೇವಾ |
ನದಿಯಿಂದುತ್ತರದೊಳಾದ ಭೂಮಿಜನಂ ಪ ||
ಟ್ಟದ ಕುದಿರೆಯೆನಿಸಿ ಮಾಡುವು |
ದದರ್ಕೆ ಸಮನಾಗಿ ಬೀಜ(ಯೋಜೆ)ವಾದು(ರು)ವನೊಂದಂ || ೫ ||

ಲಕ್ಷಣಯುಕ್ತಂ ಸರ್ವಭ |
ರಕ್ಷಮನಂ ಕ್ರೋ(ತಾ)ಧಿರಾಜನೆನಿಪನಿಲಜನ(ವ)ಂ ||
ಶಿಕ್ಷಿತವಿಧನಂ ಪಂಚವಿ |
ಧಕ್ಷಾಂತಿಯ ಶೋಣವರ್ಣನದು ಯುವರಾಜಂ || ೬ ||

ಅರಿಯಂ ಕುಲಬಲತೇಜ |
ಸ್ಸ್ವರಸತ್ವಂಜವಪ್ರಮಾಣಲಕ್ಷಣಗುಣದೊಳ್ ||
ಪರಿಪೂರ್ಣನಶುಭರಹಿತನ |
ನರಸಂ ಸೇನಾಧಿಪತಿತುರಂಗಮನಕ್ಕುಂ || ೭ ||

ಕಂ|| ಬೋರಂ ಚತುರಸ್ರ ಗುಣೋ(ಣಾ) |
ಧಾ(ದಾ)ರಂ ತೇಜಸ್ವಿ ಸರ್ವಲಕ್ಷಣಯುಕ್ತಂ ||
ವೀರಂ ಬೃಹಚ್ಛರೀರನು |
ದಾರಂ ದ್ವಿಜಕುಲನಮಾತ್ಯವಾಹನಮಕ್ಕುಂ || ೮ ||

ಇಂತಪ್ಪ ಬಣ್ಣಮಿಂಪೇ |
ಟ್ದಿಂತಪ್ಪ ಸುಲಕ್ಷಣಂಗಳಂ ಪಡೆದಂಗ |
ತ್ಯಂತಶುಭಂ ಪಡೆಯದೊಡಂ |
ಭ್ರಾಂತಿಸದರ್ಚಿಸುವುದನ್ಯವರ್ಣೋತ್ತಮಮಂ || ೯ ||

ವಿಜಯಗಜವಿಜಯಹಯಮುಂ |
ವಿಜಯಭಟಂ ವಿಜಯವನಿತೆಯೆಂಬೀ ರತ್ನ ||
ವ್ರಜದೊಳ್ ಲಕ್ಷಣಮುಂ ಭೂ |
ಭುಜನರಸಲ್ವೇಡ ಶುಭ[1]ಮುಮಂ ಗುಣರತ್ನಾ || ೧೦ ||

*ಗುಡಿ(ಡ)ಶಾಲಿತಂಡುಲಂ ಕ |
ನ್ನಡಿ ಕಲಶಂ ಗಜುಕೆ ತೋರಣಂ ದಧಿ ಪುಷ್ಪಂ ||
ಸೊಡರೆಸೆವ ರಂಗವಲಿ ಯೆಲೆ |
ಯಡಿಕೆ ಪವಿತ್ರಂ ಪ್ರಸಿದ್ಧಮಿವೆ ಗುಣರತ್ನಾ || ೧೧ ||

ಶ್ವೇತಾತಪತ್ರಮಂಗಳ |
ಗೀತಾನಕಪಟಹ ಹೇಮ[2]ಚಾಮರಗಣಿಕಾ ||
ವ್ರಾತಾಶ್ವಂ ಸುಭಟರ ಸಂ |
ಘಾತಂ ಕಹಳಾರವಂ ಮಹಾನವಮಿವರಂ || ೧೨ ||

ತೊಱೆಯೊಳ್ ಸಮುದ್ರದೊಳ್ ಪೆ |
ರ್ಗೆಱೆಯೊಳ್ ತಾವರೆಗೊಳಂಗಳೊಳ್ ಮತ್ತಂ ತಾಂ ||
ಮೆಱೆದಭಿಷೇಕಂಗೆಯ್ವುದು |
ಪಱೆ ಕಹಳಾಶಂಖ[3]ಭೂಷಣಂಗಳ ದನಿಯಿಂ || ೧೩ ||

ಪೂಸಿದ ಮಣ್ಣಂ ಕರ್ಚವು |
ದಾಸರವಂ ಪಂಚಗವ್ಯಮಂ ತಳಿದು ಜಲಾ ||
ವಾಸಮನರ್ಚಿಸಿ ವಾಜಿಗೆ |
ಪೂಸುಗೆ ಕುಂಕುಮಹರಿದ್ರೆ ಗಂಧಾದಿಗಳಂ || ೧೪ ||

---

1 ಮುಮವೆ 2 ತೋಮರ 3 ವಾದಿತಂ ?

*ಒಂದು ಪ್ರತಿಯಲ್ಲಿ ಈ ಭಾಗದ (೧೦-೧೭ ಪದ್ಯಗಳ) ಒಂದು ಓಲೆ ಗಳಿತವಾಗಿದೆ.

ಕಂ|| ಕಲಶದ ತೊವರಂ ರಕ್ಷಾ |
ವಳಿಯೊಳ್ ಸಂಮಿಶ್ರ[1]ಪುಷ್ಪಮಂ ಮಸ್ತಕದೊಳ್ ||
ತಳಿದಲ್ಲಿ ಬಣ್ಣವುರದೊಳ್ |
ಬಳಿದು ಬಟುಕ್ಕಿಕ್ಕಿ ಮೇಖಲಾಲಂಕೃತಿಯಂ || ೧೫ ||

ಪುಟ್ಟಿಗೆಯಂ ಮಣಿಸರಮಂ |
ಪಟ್ಟಿಗೆಯಂ ರಕ್ಷೆಯಂ ಪವಿತ್ರಾದಿಗಳಂ ||
ಕಟ್ಟಿ ಕೊರಲೊಳ್ ವಿರಾಜಿಸೆ |
[2]ಕಟ್ಟುಗೆ ಪಟ್ಟವ(ಂ)ಲಲಾಟ ಪಟ್ಟಾಂತರದೊಳ್ || ೧೬ ||

ಅರಿಸಿನಮಪ(ಪಾ)ಮಾರ್ಗಂ ಸಿತ |
ಸರುಷಪ[3]ಮಿಂಗಮದುರ್ವಳ್ಳಿ ನಿಂಬಂ ಲೋಧ್ರಂ ||
ಸಿರಿಸಂ ಬಜೆ ಗುಗ್ಗುಳಮಿ |
*(ಪ್ಪೆರಾಜ[4]ವೃಕ್ಷಂ) ಸರಳಂ ಸಲ್ಲೋಹಮುಪ್ಪು ಗೋರೋಚನಮಂ|| ೧೭ ||

[5]ಕಟ್ಟುಗೆ ಕೊರಲೊಳ್ ಸೀರೆಯು |
ಪೊಟ್ಟಣ(ಳ)ಮಂ ಮಾಡಿ ಧಾನ್ಯಸಮೇತಂ ನೋಡಲ್ ||
ದಿಟ್ಟಿಗಳಾಗವು ವಾಜಿಗ |
ಮುಪ್ಪವು ರಾಕ್ಷಸಪಿಶಾಚಭೂತಗಣಂಗಳ್ || ೧೮ ||

ಸುರರಾಜಾಸ್ಥಾನದ ಮಣ್ |
[6]ಸುರಮದಗಜ ಕೋಡಮಣ್ಣ ಮುಖಮಂ ನಾ ||
ಗರಮನೆಯ ಮೃತ್ತಿಕೆಯುಮಾ |
ನರನಾಥಾಲಯದ ಮೃತ್ಸ್ನೆಯುಂ ಹೃಲ್ಲೇಪಂ || ೧೯ ||

ರಂಗವಲಿ ತೋರಣಂ ಗುಡಿ |
ಮಂಗಳಮಟಿ ವೇದಘೋಷಶೇಷಾಕ್ಷತ ಪು ||
ಷ್ಪಂ ಗಂಧದೀಪಧೂಪ ಚ |
ಯಂಗಳಿನೊಪ್ಪುವ ವಿಶಾಲ ಶಾಲಾಂತರದೊಳ್ ||೨೦ ||

ಹೋಮಂಗೆಯ್ಸುವುದಲ್ಲಿ ಧ |
ರಾಮರರಿಂದವರ್ಗೆ ಕುಡುಗೆ ದಕ್ಷಿಣೆಯಂ ಸಂ ||
ಗ್ರಾಮಜಯಮಪ್ಪ ಪರಕೆ ಧೆ |
ರಾಮರರೊಸೆದಿತ್ತ ಶೇಷೆ ಕಲ್ಯಾಣಕರಂ || ೨೧ ||

---

1 ಮಶ್ರ್ಪದಂಮಸ್ತ 2 ಕಟ್ಟದ ಪಟ್ಟಂ ಲಲಾಟಪಟ್ಟಾಂತರದೊಳ್, ಪಟ್ಟಮಂ ಲಲಾಟಾಂತರದೊಳ್ 3 ಗರ್ದುಗಮದುರ್ಗ, ಗಂಧಮಮದುರ್ಗ 4 ಲೋಹಣಂ ರೋಚನಮಂ 5 ಕಟ್ಟ 6 ಣ್ಣರೆದಾ........ ಮತ್ತದಜಿೊಳಾ, ಉರಗಾಲಯ ಮೃತ್ತಿಕೆಯಂ ನರ

*ಈ ಕಂದಪದ್ಯದಲ್ಲಿ ಛಂದೋ ದೋಷವಿದೆ- "ಪ್ಪೆರಾಜವೃಕ್ಷಂ ಸಲೋಹ ಗೋರೋಚನಮಂ" ಎಂದಿರಬಹುದು

ಕಂ|| ರೇವಂತಪೂಜೆಯಂ ಸ |
ದ್ಭಾವದೆ ಮಾಡುವುದು ಚರುವು(ಕ)ಬಲಿ ತಾಂಬೂಲಂ ||
ಪೂವಕ್ಷತೆ ಗಂಧಂ ಕೆ |
ಯ್ದಾವಿಗೆ ಪಟುಪಟಹಶಂಖ ಭೇರೀರವದಿಂ || ೨೨ ||

ಜಯ ದೇವ ಭಾನುಪುತ್ರಕ |
ಜಯ ತುರಗಾರೂಢ(ರೋಹ) ಸಾರವಿಜ್ಞಾನನಿಧೀ ||
ಜಯ ತುರಗಹೃದಯಚಿತ್ತಾ |
ಜಯ ತುರಗಪ್ರಿಯ ಸುರೇಜ್ಯ ಜಯ ರೇವಂತಾ || ೨೩ ||

ಎಂದು ಪೊಡಮಡಿಸುವುದು ನೃಪ |
ನಂದನನಂ ಸೂರ್ಯನಂದನಂ ರೇವಂತಂ ||
ಗೆಂದುಂ ಸಂಗ್ರಾಮಜಯಾ |
ನಂದಮನಧಿಪತಿಗೆ ಮಾಡುಗುಂ ರೇವಂತಂ || || ೨೪ ||

ಅಭಿಷೇಕಂ ತೋರಣದೊಳ್ |
ವಿಭೂತಿಯಿಂ ತಂದು ಪಟ್ಟವರ್ಧನಕೆ ಜಗ ||
ತ್ರಿಭುವಂ ಪೊಡಮಡಿಸುವುದಿರು |
ಳಭಿಮುಖನಾಗಿರ್ದು ಶಾಸ್ತ್ರ[1]ವೇದ್ಯಂ ವೈದ್ಯಂ || ೨೫ ||

(ಮಂತ್ರಂ)

ಜಯ ಪದ್ಮಜಾಶ್ರುಸಂಭವ |
ಜಯಜಯ ಹೋಮಾಗ್ನಿಸಂಭವೋತ್ತಮವಾಹಾ ||
ಜಯ ಮೃ[2]ಗ್ಯುಲೂಕಸಂಭವ |
ಜಯಜಯ [3]ದುಗ್ಧಾಬ್ಧಿಮಥನಸಂಭೂತ ನಮೋ(ಮಃ) || ೨೬ ||

ಜಯಜಯ [4]ದನುಜಕುಲ ವಿಧೇ(ಕ್ಷ)ಯ |
ಜಯವಿಜಯ ಶ್ರೀವಿಭೂಷಿತಾ ಭರ[ಣಗ]ಣಾ ||
ಜಯಜಯನಿಜಾಧಿಪತಿ ಹಿತ |
ಜಯವಿಜಯಾಹವಜಯಾಶ್ವ ಹಯರಾಜ ಜಯಾ || ೨೭ ||

* ಜಯಜಯ(ತು) ಮಮಶತ್ರುಪಕ್ಷ |
ಕ್ಷಯಕರ ಜಯಜಯ ತಥಾತು ಮಮ ವಿಜಯಕರಾ ||
ಜಯಜಯ(ತು)ರಾಜ್ಯಲಕ್ಷ್ಮೀ |
ಪ್ರಿಯತಮ ಯಿವ ಜಯತು ಜಯತು ಕೀರ್ತಿಶ್ರೀಯಂ || ೨೮ ||

1 ಶಸ್ತ್ರಂ, ಶಸ್ತ್ರಂ, ವೈದ್ಯದಿವ್ಯಂ 2 ಮೃಗಮುಲೂಕಿಗಂ 3 ದುಗ್ಧಾಬ್ಧಿ ಮಥನನೋತ್ಪನ್ನಾ, ಮಂಥಾಬ್ಧಿ 4 ಕುಲಕ್ಷಕರ, ದನುಕುಲಕ್ಷರ

* ಈ ಕಂದವು ಒಂದು ಪ್ರತಿಯಲ್ಲಿ ಇಲ್ಲ, ಇದರಲ್ಲಿ ಶುದ್ಧಪಾಠವೂ ಇಲ್ಲ.

ಕಂ|| ಎಂದು ಪೊಡಮಡುತೆ ಪರಮಾ |
ನಂದದೆ ತಾಂ ಪಟಹ ಶಂಖ ಕಹಳಾ[1] ಭೇರೀ ||
ಸಂದೋಹವೆಸೆಯೆ ಜಯಜಯ |
ವೃಂದಮೆ ದೈವಂಗಳೆಂದು ಮನ್ನಿಸು(ಸಿ)ಭೂಪಂ || ೩೯ ||

ಮಂಗಳ ಜವುಳೆ[2] ಝುಳಂಬಮ |
ನುಂಗುರಮಾ ಕರ್ಣಶೋಭೆಯಂ ಪ್ರಿಯದಿಂ ವೈ ||
ದ್ಯಂಗಿತ್ತು ಬಟಿಕೆ ಶಸ್ತ್ರಚ |
ಯಂಗಳನರ್ಚಿಸುಗೆ ಸಾರ್ವಭೌಮಂ ಕ್ರಮದಿಂ || ೩೦ ||

ಇದು ನೀರಾಜನವಿಧಿ[3]ಯೆಂ |
ಬುದು ಪೂಜ್ಯಂ ಚಂದ್ರಮತದೊಳೆಂಟನೆಯಧ್ಯಾ ||
ಯದ ವಿರಚನೆ ಪತಿಗಂತ |
ಭ್ಯುದಯಕರಂ ಶ್ರೀಬಲಾಯುರಾರೋಗ್ಯಕರಂ || ೩೧ ||

ಇಂತು ಅಷ್ಟಮಧ್ಯಾಯಂ

1 ಭೇರೀಮೃದಂಗಂಗಳೆಸೆ 2 ಝಣಂಬೆರಲುಂಗುರ ರಮಣಂ, ಬೆರಲುಂಗುರ 3 ಯಂ | ಬುಧಪೂಜ್ಯ

# ನವಮಾಧ್ಯಾಯಂ

## ಹಯಶರೀರ ಪ್ರದೇಶ ಜ್ಞಾನಂ

ಕಂ|| ಮಾನಿತ ಹಯಪ್ರದೇಶ |
ಜ್ಞಾನಂ ಕ್ಷಾರಾಗ್ನಿಶಸ್ತ್ರ ಕರ್ಮಜ್ಞಾನಾ ||
[1]ನೂನಂ ಪ್ರಗಾಢ ಕ್ರಮದಿಂ |
ಸ್ಥಾನದ ನಾಮಾಭಿಧಾನಮಂ ಪ್ರಕಟಿಸುವೆಂ || ೧ ||

ಕುದಿರೆಗಳ ಶರೀರದೊಳಂ |
ಪ್ರದೇಶನಾ[2]ಮಮುಮನರಿದು ಶಸ್ತ್ರಾಗ್ನಿವಿಧಂ ||
ಮೊದಲಾದ ಕ್ರಿಯೆಯುಂ ಮಾಡಲ್ |
ಪ್ರದೇಶನಾಮಮುಮಂ[3]ನೆಯ್ದೆ ಪೇೞ್ವೆಂ ಕ್ರಮದಿಂ || ೨ ||

ಕೆಳಗಣ ಮೇಲಣ ಪ[4]ಲ್ವೇ |
ಗ[5]ಳ ಪಿಡಿದಿಹ ಸಂದು ದಂತಪೀಠಿಕೆಯಕ್ಕುಂ ||
ಕೆಳ ಅಣಲ ಮೇಲೆ ಪಲ್ಲಂ[6] |
ತೊಳವಕ್ಕಂ ಗಂಡ(ಧ)ಮೆಂಬ ಪೆಸರಿಂ ತೋರ್ಕುಂ || ೩ ||

ಕಟವಾಯಂ ಸಂಧಿಗಳಂ |
ಘಟಿಯಿಸುಗುಂ ಸೃಕ್ವಿಣಿಯದೆಂಬ ಪೆಸರುಂ ಮೇಳ್ರ್ಪಂ ||
ತಟ ಗೊತ್ಸಂದೇಶಮುಮಾ |
ಕಟಜಿಹ್ವಾಬಂಧಮೆಂಬ ಪೆಸರಿಂ ತೋರ್ಕುಂ || ೪ ||

ತಾಲುಗೆಯೆಂಬುದು ಜಿಹ್ವೆಯ |
ಮೇಲಿರ್ಕುಂ ತಾಲುವಿಂದೆ ಕೆಳಗಣ (ಗುಂ)ನೆಲೆಯುಂ ||
ತಾಳಿಗೆದೆರೆ ದ್ವಾತ್ರಿಂಶತ |
ಮಾಳಿರ್ಕುಂ ಕೂರ್ಮೆಯೆಂಬ ಪೆಸರಿಂ ತೋರ್ಕುಂ || ೫ ||

ಅತೆರೆಗಳ ನಡುರೇಖೆಗ |
ಮೋತಿರ್ಕ್ಕುಂ ವಾ(ಸೂ)ಜಿಯೆಂಬ ಪೆಸರುಂ ಮತ್ತಂ ||
ಅತೆ(ಥೆ)ರೆಗಳಮೇಲ್ ರೇಖೆಗೆ |
ಖ್ಯಾತಂ ತಾಂ ತಾಳುವಂಶಮೆಂಬಭಿಧಾನಂ || ೬ ||

1 ರೂಢಂ, ಧೀನಂ 2 ನಾಮಮನಱಿದವರ್ಗೆ ಶಸ್ತ್ರಕರ್ಮಾಗ್ನಿಕರ್ಮಬಂಧನಾಸ್ಥಾಪನೆ ಮೊದಲಾಗೊಡೆಯ ಕ್ರಿಯೆಗಳಂ ಮಾಡಲ್ಪಾರದಪ್ಪುದಱಿಂ 3 ತಿಳಿಯಪೇೞ್ವೆ 4 ಲ್ವೆಗ್ಗ 5 ಡಿಪ್ಪೊಸಡುಗಳ್ಗೆದಂತ 6 ಲ್ಲಂಪ್ರೊಲೆದಹ

ಕಂ|| ಅಣೆ(ಣು)ಗೆಯೊಳೆ ಪುಟ್ಟಿತೋರ್ಪಾ |
ಅಣಲ್ವಲ್ಗಂ ದಂತಮೆಂಬ ಪೆಸರುಂ ಮತ್ತಾ ||
ಅಣಲ್ಗಳ ದಾಡೆಯು ಪಲ್ಲಿಂ |
ಗಣಿಸುಗೆ ತಾಂ ದಂಷ್ಟ್ರೆಯೆಂಬ ಪೆಸರ್ ನಿದಾನಂ || ೭ ||

ಕಡೆವಲ್ಲಿಂ ನಾಲ್ಕಕ್ಕುಂ |
ಪಡೆಗುಂ ತಾಂ ಪಾರಿಕ್ವಮೆಂಬಾ ಪೆಸರಂ ||
ನಡುವಲ್ ನಾಲ್ಕಕ್ಕುಂ ತಾಂ |
ಗಡಣಿವುದಾ ಮಧ್ಯಮೆಂಬ ಪೆಸರಂ ಪಡೆಗುಂ || ೮ ||

ಮುಂಬಲ್ಲಂ ನಾಲ್ಕಕ್ಕಮು |
ದೆಂಬುದು ಸಂದಂಶಮೆಂಬ ಪೆಸರುಂ ಮೇಗಣ ||
ಕೆಂಬಲ್ಲುಮುಗ್ರದಂತವ |
ದೆಂಬುದು ತಾಂ ಪಲ್ಲ ಪೊಱಗು ಬಾಹ್ಯಮೆನಿಕ್ಕುಂ || ೯ ||

ಒಳಗಭ್ಯಂತರಮಾ ತುದಿ |
ಗಳಿಗಗ್ರಂ ತಾನದೆಂಬ ಪೆಸರುಂ ಮೊದಲೊಳ್ ||
ತಳಮೂಲಮೆಂಬ ಪೆಸರುಂ |
ಪೊಳಪೊಱತುದಿಮೊದಲ್ಗಳೆಲ್ಲ ಪಲ್ಲಿನ ಭೇದಂ || ೧೦ ||

ಪಲ್ಲಮ್ಮುಚ್ಚಿರ್ಪಾ [1]ಮೇಲಣ |
ಪಲ್ಲೋಷ್ಠದಕೆಂತುಮೋಷ್ಠಮೆಂದುಂ ಪೆಸರುಂ ||
ನಿಲ್ಲದಧರೋಷ್ಠ ಕೆಳಗ |
ಕ್ಕಲ್ಲಿಯೆ ಚುಬುಕೆಂಬ ಪೆಸರನನುಕರಿಸಿರ್ಕುಂ || ೧೧ ||

ಉತ್ತರದೋಷ್ಠದ ನಡುವಮು |
ಬಿತ್ತರಿಪ ಪ್ರಪಾನಮೆಂಬ ಪೆಸರಾ ಪ್ರಪಾನ ||
ದುತ್ತರ ಪ್ರೋಥಮುದಕ್ಕುಂ |
ಬಿತ್ತರ ಪ್ರೋಥದೆರಡುಕೆಲದ ನಾಸಾಪುಟಮುಂ || ೧೨ ||

ಪ್ರೋಥದ ಕಣ್ಣಿಡೆ ಘೋಣಮು |
ದಾತೆಱ ಮೂಗೆಸೆವಕೆಂಬಿ ನಾಸಾವಂಶಂ ||
[2]ಸ್ರೋತದ ಮಾರ್ಗೆಂಬಾ ಪೆಸ |
ರೋತಿರ್ಕುಂ ಮೂಗಿನೊಳಗುಮುಶ್ಮಾಗಮದೊಳ್ || ೧೩ ||

1 ಕೆಳಗಣ 2 ಶ್ರೋತಮಾರ್ಗೆಂಬ

ಕಂ|| ಕಣ್ಣೊಳಗಣ ಮೊದಲಿಂಗಂ |
ಬಣ್ಣಿಪೆ ನಯನಾಶ್ರುಪಾತಮೆಂಬಾ ಪೆಸರಂ ||
ಕಣ್ಣಾಪಾತದ ಮೇಲಣ |
ಕಣ್ಣಕ್ಷಿಗಣಂ ಗಣಂಗಳಪ್ಪ ಪೆಸರೆ ನಿಧಾನಂ || ೧೪ |

ಕಣ್ಣಂ ಮುಚ್ಚಿಹ ಪೊಟ್ಟೆಯೆ |
ಸನ್ನುತವರ್ಕುಣಿಕೆಯುದೞ ಮೇಲಣ ರೇಖಂ ||
ಬಣ್ಣಿಪೊಡದು ಕ್ಷಣಿಯುಕ್ಕುಂ |
ಕಣ್ಣೊಳಗಣಬಿಳಿಯು ಆಲಿ ಶುಕ್ಲಮದಕ್ಕುಂ || || ೧೫ |

1ಶುಕ್ಲದ ಭಾಗದ ಕರ್ಪುಂ |
ತೋರ್ಕುಂ ತಾಂ ಕೃಷ್ಣಭಾಗಮೆಂಬಾ ಪೆಸರಿಂ ||
ದಕ್ಕಸಿತಬಾಗೆನಡುವಿಗೆ(ರೆ) |
ಬರ್ಕುಂ ತಾಂ ವೃ(ದಿ) ಷ್ಟಿಭಾಗಮೆಂಬೀ ಪೆಸರುಂ || ೧೬ |

ಕಣ್ಣಿನ ಪೊಟ್ಟೆಯ ಮೇಗದು |
ಬಣ್ಣಿಸೆ ನಯನಾಕ್ಷಿಕೂಟಮೆಂಬಾ ಪೆಸರುಂ ||
ಕಣ್ಣ ಪೊಱಪುರ್ವುಗಳ್ಗಂ |
ನುಣ್ಣನೆ ಭ್ರೂಮಧ್ಯಪೆಸರೆ ಹಯಶಾಸ್ತ್ರದೊಳಂ || ೧೭ |

ಎರಡುಂ ಪುರ್ಬಿನ ನಡುವುಂ |
ಪೆರುಗುಂ ಭ್ರೂಕುಟಿಯುದೆಂಬ ಪೆಸರದಕಕ್ಕುಂ ||
ವರಕಣ್ಣ ಮೊದಲ ಮಾಂಸದ |
ಕರ ಕೆಂಪೆ ಕಣೀರಮೆಂಬ ಪೆಸರಂ ಪಡೆಗುಂ ೧ ೧೮ |

ಕಣ್ಣೀರ ಶುಕ್ಲಭಾಗ(ದ)ಕೆ |
ಬಣ್ಣಿಪ ಸು(ಷಿ)ರಕ್ಕೆ ತಾನುಮಾಗಸಮೆಂಬುದು ||
ಕಣ್ಣಿನ ಪೊಱಗಣ ಕಡೆಯಣ |
ಕಣ್ಣಂಗಪಾಂಗಮೆಂಬ ಪೆಸರಂತಕ್ಕುಂ || ೧೯ ||

ಸ್ತುಪ್ಪದ ಪುರ್ಬಿಡೆ ನೋಡ |
ಲ್ಕಪ್ಪುದು ಲಲಾಟಮೆಂಬ ಪೆಸರಿಂದಕ್ಕುಂ ||
ತಪ್ಪದೆ ಲಲಾಟಮೆಂಗುಂ |
ಬರ್ಪುದು ತಾಂ ಸ್ತೂಪಮೆಂಬ ಪೆಸರಂತಕ್ಕುಂ || ೨೦ ||

1 ಶುಕ್ಲದ ಗೆಸೆವಗ

ಕಂ|| ಎರಡುಂ ಕಿವಿಯೆಡೆಗಕ್ಕುಂ |
ಸಿರಮೆಂಬಭಿಧಾನ ಸಿರದ ನಡುವೆಯುಂ ಮಸ್ತಕ ||
ವಿರೆ ಮಸ್ತಕದೆರಡು ಕೆಲ |
ನೆರೆ ಕಿವಿಯುಂ ಕರ್ಣಂಗಳೆಂಬ ಪೆಸರದಕಕ್ಕುಂ || ೨೧ ||

ಕಿವಿಗಳ ಮುಂದಣ ರೇಖೆಗೆ |
ಸವನಿಕು ತಾಂ ಕರ್ಣಕುಲಿಯುವೆಂಬೀ ಪೆಸರುಂ ||
ಕಿವಿಯೊಳಗಣ ಬಯಲ್ಗಳುಂ |
ಸವನಿಪ ಶ್ರೋತ್ರಾ(ಸಿ)ಣಿಯೆಂಬ ಪೆಸರಂ ಪಡೆಗುಂ || ೨೨ ||

ಪಣೆ ಕಿವಿ ಕಣ್ಣೆಡೆಯೊಳ್ ತಾಂ |
ಗಣಿಯಿಸುಗುಂ ಕಟಕವೆಂಬ ಪೆಸರುಂ ಚಿಬುಕದ ಮೇ ||
ಗಣ ಅಣುಗಳೆ ಹನು ವದಕಂ |
ಹನುವಿನ ನಡುವಣವುಗಳ್ಗೆ ಗಂಡಮುದಕ್ಕುಂ || ೨೩ ||

ಗಂಡದ ಪೊಱಗಣ ಕೆಳಗಣ |
ತಂಡಕೆ ಹನುಚಕ್ರವೆಂಬ ಪೆಸರದಕಕ್ಕುಂ ||
ಮಂಡನ ದಂತದು ಹನುಕಡೆ |
ಗಂಡಿರ್ಕುಂ ನಾಲ್ವತೆ(ರಡು)ೀಱು ಮಂತಿಮುಮಕ್ಕುಂ || ೨೪ ||

ಮತ್ತಂತಾ ಹಯದ ಕೊರಲೊ |
ಳುತ್ತಮ ನಡುವಣ ಪ್ರದೇಶ ನಿಗಳಮುದಕ್ಕುಂ ||
ಬಿತ್ತರದ ಕಿವಿಯ ಪೊಱಗಂ |
ವರ್ತ್ತಿಕು ಬಿಡಗೆ(ಬಿದುವೆ)ಂಬ ಪೆಸರೆ ಹಯಶಾಸ್ತ್ರದೊಳಂ || ೨೫ ||

ಬಿಡ(ದು)ವಿನ ಸಮೀಪದೆಡೆಯುಂ |
ಪಡೆವುದು ವರ್ನಣಿಯುದೆಂಬ ಪೆಸರಂ ಮತ್ತಾ ||
ನಡುಕಂಠನಾಳಿಯಿರ್ಕೆಲ |
ದೆಡೆಗಂ ಮನ್ಯುವದೆನಿಪ್ಪ ಪೆಸರೆಸೆದಿರ್ಕುಂ ||೨೬ ||

ಮನ್ಯುಗಳ ತಲೆಯ ಯೆಡೆಯುಂ |
ಪ್ರದೇಶಕಂ ಗ್ರೀವವೆಂಬ ಪೆಸರದಕಕ್ಕುಂ ||
ತದಧರದ ಮೇಲ ಪೆಗಲ್ಗಂ |
ಸ್ಕಂಧಮುವೆಂದೆಂಬ ಪೆಸರೆ ತುರಗಾಗಮದೊಳ್ || ೨೭ ||

ಸ್ಕಂಧದ ಮೇಲಣ ವಳಯ |
ಕ್ಕೆಂದುಂ ಕೇಸರಮದೆಂಬ ಪೆಸರುಂ ಕೇಸರ ||
ದಿಂದೆ ಕೆಳಗೆರಡು ವೃದ್ಧರ |
ಸ್ಕಂಧದ ಕೆಲ ಕೇಸರಂಗಳುಂ ಕಾಕಸೆಯುಂ || ೨೮ ||

ಕಂ|| ಕಂಠದ ನಡುವಳಯದ ಪೆಸ |
ರುಂಟೆನಿಸುಗು ಕಕ್ಷವದಱ ನಡುವಣ ದೇಶಂ ||
ಕಂಠವದೆನಿಸಿರೆಕೊಳ್ವುದು |
ಗೆಂಟುಂ ನಿಗಳಾದಿ ಕಂಠಕಡೆ ಪನ್ನೊಂದುಂ || ೨೯ ||

ಮತ್ತದು ಕಂಠದ ಕೆಳಗಂ |
ಜತ್ರುವೆ ತಾನೆಂಬ ಪೆಸರುಮದಱಿಂ ಕೆಳಗುಂ ||
ವರ್ತಿಕು ವಕ್ಷಮುದೆಂಬುದು |
ಮತ್ತಂ ವಕ್ಷದೆಯೆಡೆಯೆ ಕ್ರೋ(ಳ)ಡಮುದಕ್ಕುಂ || ೩೦ ||

ಆವಕ್ಷಮನಾಶ್ರಯಿಸಿದ |
ತಾವೆರಡು ಕಕುದೆಸ ಬಂಧಿಯುಂಶ(ಸ)ಮೆನಿಕ್ಕುಂ ||
ಆ ವಂಶದ ಮೊದಲಾಶ್ರಯು |
ತಾವಿನ ಮುಯ್ಯುಗಳೆ ದಾವವೆಂಬಭಿಧಾನಂ || ೩೧ ||

ದಾವದ ಕೆಳಗುಂ ಬಾಹ್ಯವೆ |
ಭಾವಿಪೊಡಾ ಬಾಹ್ಯ ಮೂಲದೊಳ್ ಜಾಂಗಳ ವೆಂ ||
ಬೀ ವಿಥಥ ಪೆಸರ್ ಬಾಹ್ಯದ |
ದಾವೊಳಗಣ ಕಲೆಗಳಂಗೆ ಕೇ(ಕಿರ)ಣಮುದಕ್ಕುಂ || ೩೨ ||

ಬಾಹ್ಯದ ಕೆಳಗಣಮೊಟಕಾಲ್ |
ಬಾಹ್ಯಕೆ ಜಾನುಮೆಂಬ ಪೆಸರದಕಕ್ಕುಂ ||
ಬಾಹ್ಯದ ಮೊಟಕಾಲ್ ಕಟಕಕೆ |
ಬೇಹುದು ತಾಂ ಪಾಣಿ(ಳಿ)ಯೆಂಬ ಪೆಸರದಕಕ್ಕುಂ || ೩೩ ||

ಅದಱಿಂದೆ ಮೇಲೆನಿಪ್ಪಾ |
ಮದಿ(ಡಿ)ಸಂದಿಗೆ ಜಾನುಮುಂಜರೆಂಬಭಿಧಾನಂ ||
ಅದು ಜಾನುವಿಂದೆ ಕೆಳಗುಂ |
ಪದುಳಂ ತಾಂ ಜಂಘೆಯೆಂಬ ಪೆಸರದಕಕ್ಕುಂ || ೩೪ ||

ಜಂಘೆಯು ಕೆಳಗದು ಪಱಿಹ |
ತ್ತಂ ಗುದ ಮೊಟಕಾಲ ಕೆಳಗೆ ಪಱಿಹತ್ತಮುನಾ ||
ಶ್ರಂಗೆಯುದ್ದ ಕೂರ್ಚೆಯೆಂಬುದು |
ಪಿಂಗದೆ ಕೂರ್ಚಕೆ ಕೆಳಗೆ ಕಳೆ(ಳಿ)ಯೆಂಬ ಪೆಸರ್ || ೩೫ ||

ಕ(ಳಿ)ಳೆಯಿಂರ್ಕೆಲದೊಳ್ ತಾ |
ನಳವಡಿಸುಗು [1] ಮಿಸಿ(ಹಿ)ಕೆಯೆಂಬ ಪೆಸರದಕಕ್ಕುಂ ||
ಕೆಳಗೆ ಖುರದಿಂದೆ ಪಾಶೆ(ಷ್ಣಿ)ಯೆ |
ಯುಳವಡಿಕುಂ ಪೆಸರದರ್ಕೆ ಹಯಶಾಸ್ತ್ರದೊಳಂ || ೩೬ ||

1 ಮಿಹಿರೆ

ಕಂ|| ಅಂತಾ ಜಂಘೆಯ ಕೆಳಗಂ |
ಮುಂತಣ ಪಿಂತೆಸೆವ ಕಾಲ್ಗಳಾ ಪ್ರಾದೇಶದ ||
ಸಂತತನಾಮೊಂದೇತೆಱ |
ನಂತಂಶಂ ಮೊದಲಿಗಲ್ಲಿ ಗಿರ್ಪತ್ತೊಂದುಂ || ೩೭ ||

ಅಲ್ಲಿಂ ಕೆಳಗಾನಾಭಿಯ |
ದಲ್ಲಿಡೆಗಂ ಹೃದಯುಮೆಂಬ ಪೆಸರದಕಕ್ಕುಂ ||
ಸೊಲ್ಲಂ ಹೃದಯದ ಕೆಳಎಡೆ |
ಯಲ್ಲಿಯೆ ತಾಂ ನಾಭಿಯೆಂಬ ಪೆಸರಂ ಪಡೆಗುಂ || ೩೮ ||

ನಾಭಿಯ ಶಿಶ್ನೆಯುಯೆಡೆಯುಂ |
ಶೋಭಿಪುದಾ ಜಠರವೆಂಬ ಪೆಸರದಕಕ್ಕುಂ ||
ಕಾಬುದು ಬಾಹುವ ಮೂಲದೆ |
ಕಾಬಾ ಕುಟಿ ಕಕ್ಷವೆಂಬ ಪೆಸರಿಂ ತೋರ್ಕುಂ || ೩೯ ||

ಆಸನದಿಂ ಕೆಳಗಣ ಬರಿ |
ಗಾಸನ್ನಂ ಕೋಷ್ಠವೆಂಬ ಪೆಸರದಕಕ್ಕುಂ ||
ವಾಸಾಕೋಷ್ಠದ ಕೆಲರೇ |
ಖಾಸೆಯೆ ತಾಂ ಕುಕ್ಷಿಯೆಂಬ ಪೆಸರಂ ಪಡೆಗುಂ || ೪೦ ||

ಕುಕ್ಷಿಯ ಮೇಲಾಕಕುದಿಟಿ |
ಯಿಕ್ಷಿಸುಗಾ ಪೆಸರೆ ಕುಕ್ಷಿ ಪೊಱಕೆಳಗಣ ಭಾ ||
ಗೀಕ್ಷಿಸು ಕಕುದಿಯ ಸಂಧಿಯ |
ಪೇಕ್ಷಿಸು ಕಕುಸಂದಿಯೆಡೆಗೆ ರಂಧ್ರವೆಯೆಂದುಂ || ೪೧ ||

ರಂಧ್ರದ ನಾಭಿಯೆಡೆಯೊಳುಪ |
ರಂಧ್ರಮೆನಿಕ್ಕುಂ ಸರಂಧ್ರೆದುಪರಂಧ್ರದ ನಡು ||
ವಂದಕ್ಕುಂ ಮೇಖಳೆಯುಂ |
ಸಂಧಿಸೆ ನಾಭಿಯೆಡೆ ರೋಮರಾಜಿಯದಕ್ಕುಂ || ೪೨ ||

ಕಕುದದ ರೋಮದಯೆಡೆಯುಂ |
ಕಾಕಸೆಯಾ ಕಾಕಸಾಸನದ ನಡು ಮತ್ತಾ ||
ಕಕುಮಧ್ಯಮೆಂದು ಪೇಟ್ಟುದು |
ಕಕುದಿಂ ಪೊಱಗೆಸೆಯೆ ಆಸನೆಂಬುದು ಪೆಸರುಂ || ೪೩ ||

ಆಸನದ ಪೊಱಗೆ.ಪೃಷ್ಠಮ |
ದೀಸೆನಿಪಾ ಪೆಸರದಕ್ಕು ಮದಱಿಂ ನಡುವಣ ||
ದೇಶದ ನಿಟ್ಟೆಲುವಿಂಗಂ |
ಆಸರಿಸುಗುವಲಕುಟಂತ್ರಿಕಂ ತಾಮೆಂದುಂ || ೪೪ ||

ಕಂ|| ತಿಕ(ಗ)ದಿರ್ಕೆಲ ರೋಹಿಣಿ ಯೆನಿ |
ಸಗುವುದು ವದಱ ಕೆಳಗೆ ಪಾಂಡುಂ ಸಂಧಿಯೆ ||
ಬಗೆ ಜಘನದಿಂದೆ ಕೆಳಗಂ |
ಬಗೆ ಬಾಲಂ ಪುಚ್ಛದಂಡವೆಂಬೀ ಪೆಸರಿಂ || ೪೫ ||

ಬಾಲದ ಕೆಳಗುಂ ಗುದಮುಂ |
ಲೀಲೆಯ ಗುದದೆರಡು ಕೆಲನ ವ್ಶ(ವೃ)ತ್ತಿಕೆಯೆಂಬರ್ ||
ತಾಲುವ ವ್ಶ(ವೃ)ತ್ತಿಗೆ ಕೆಳಗುಂ |
ಪೇಟಾ ರೋಮಸ್ವಮೆಂಬ ಪೆಸರಂತಕ್ಕುಂ || ೪೬ ||

ಬಾಲದ ದಂಡಿಗೆ ಮತ್ತಾ |
ಬಾಲದ ದಂಡೆಂಬ ಪೆಸರನನುಕರಿಸಿರ್ಕುಂ ||
ಬಾಲದ ಮಱೆಯೊಳಗಿರ್ಪುದ |
ಲೀಲೆಯಿನಱ ಪಾನವೆಂಬ ಪೆಸರದಕೆಂದುಂ || ೪೭ ||

ಆ ಪಾನದೆರಡು ಕೆಲನದು |
ವಪ್ಪುದು ತಾಂ ಸ್ಫಿಕ್‌ಪಿಂಡಮೆಂಬೀ ಪೆಸರಿಂ ||
ತೋರ್ಪುದಱ ಕೆಳಗೆ ಚಟುಳವು |
ದಾಪಾನದ ಕೆಳಗೆ ಶಕ್ತಿಶಿವನಿಯದಕ್ಕುಂ || ೪೮ ||

ಶಕ್ತಿಶಿವನಿಯಾ ಮುಷ್ಕದ |
ತಕ್ಕೆಡೆ ವಂಕ್ಷಣಮದೆಂಬ ಪೆಸರದಕಕ್ಕುಂ ||
ಶ(ಯು)ಕ್ತಿಯ ಶಿವನಿಯ ಕೊಟ್ಟೆಡೆ |
ಯುಕ್ತಂ ತಾಂ ಹೇಹ(ಮೇಘ)ವೆಂಬ ಪೆಸರದಕೆಂತುಂ || ೪೯ ||

ಮುಷ್ಕದ ನಾಭಿಯ ಯೆಡೆಯುಂ |
ಬಕ್ಕೆಂದುಂ ಶಿಶ್ನಿಯೆಂಬ ಪೆಸರದಕಕ್ಕುಂ ||
ಠೋರ್ಕುಂ ಶಿಶ್ನಾಗ್ರಕೆ ಕ |
ರ್ಣಿಕ್ಕೆಯೆ ಪೆಸರಮದಿನ್ನು ತುರಗಾಗಮದೊಳ್ || ೫೦ ||

ಅಲ್ಲಿಂ ಮೂತ್ರಂ ಬರ್ಪೆಡೆ |
ಗಲ್ಲಿಗೆ ತಾಂ ಶಿಶ್ನದಾರೆಯೆಂಬುದು ಪೆಸರುಂ ||
ಬಲ್ಲರ್ ಮೂತ್ರದ ಕೋಶದ |
ಬಲ್ಪಿಂದದಱ ಕೆಳಗಂಡಜಾತಮದೆಂಬರ್ || ೫೧ ||

ಸ್ತುರೆಯಿಂ ಮೇಲ್ ಚಕ್ರ(ಚಂದ್ರ) ಶಕ್ತಿ |
ಬೆರಸಿರ್ಕುಪೆಸರ ರೋಹಿಣೀ ಸಂಧಿಯಕೆಳ ||
ಗಿರೆ ಕಾ(ಸೂ)ಸುಳ ಪೆಸರದಕೆಂ |
ಬರ ಪಾನದ ನಡುವೆಯದಕೆ ಯುಗಸಂಧಿಯುಮಂ || ೫೨ ||

ಕಂ|| ಯುಗಸಂಧಿಯು ಕೆಳಗಂ ನೀಂ |
ಬಗೆ ಶಕ್ತಿಶಿವನಿಯೆನೆ ಪೆಸರಾಪಾಂಡುಂ ಪಿ ||
ಡಗಲದ ಕೆಳಗದು ಮತ್ತಂ |
ಬಗೆಯೂರುಕವದೆ(ಮೆ)ಂಬ ಪೆಸರೆ ತುರಗಾಮದೊಳ್ || ೫೩ ||

ಊರುವಿನ ಕಣ್ಣದಿಡೆ ತಾ |
ನಾರಯ್ ನೀಂ ಪಾಂಡುಪಿಂಡ ಮೆಂಬಭಿಧಾನಂ ||
ಓರಂತೆ ಚಕ್ರಶಕ್ತಿಯು |
ಸಾರಣ ಕೆಳಗೆಸೆವ ಜಂಘೆಯೆಂಬಭಿಧಾನಂ || ೫೪ ||

ಸ್ತುರೆಯಿಂ ಕೆಳಗಕ್ಕುಂ ಮಂ |
ಜರಿಯೆಂಬಾ ಪೆಸರದರ್ಕುವಾ ನಡುವೆಯದಾಂ ||
ತಿರೆ ಶಂಖವೆಂಬ ಪೆಸರುಂ |
ಸ್ತುರೆಯಿಂ ಕೆಳಗಕ್ಕುಮತ್ತ ಜಂಘಾಕ್ಷೇತ್ರಂ || ೫೫ ||

ಅವಱವಱಮೇಲೆ ಕಲೆಗಳ್ |
ಸವನಿಸುಗುಂ ಕಿಣ(ಕಣೆ)ವೆಂಬ ಪೆಸರುಂ ಮತ್ತಂ ||
ಶಿವನಿಯ ನಡುವಣ ಯೋನಿಯ |
ನವಗಮಿಸಂತಪರಭಾಗೆ ಮೂವತುಮೂಱುಂ ||೫೬ ||

ತುರಗಕ್ಕಂ ಗೋಟೆಗೆಗಂ |
ಸರಿಸಂ ಸಂಸ್ಥಾನವಷ್ಟವಿಧ ಲಕ್ಷಣಮಂ ||
ತೆರಡಕ್ಕವೊಂದೆ ಭೇದಂ |
ತುರಗಕ್ಕಲ್ಲಿಲ್ಲ ಯೋನಿಯುಂ ಸ್ತನಯುಗವು(ಳ)ಂ || ೫೭ ||

ಮೊದಲಾಗೆ ದಂತಪೀಠಿಕೆ |
ತುದಿಯಾಗಿರೆ ಯೋನಿ ನೆಗಲ್ದ ಸರ್ವಾವಯವಂ ||
ಕುದಿರೆಗೆ ನೂಱುಂತೊಂಬತು |
ಪ್ರದೇಶಗಳ ಸಂಖ್ಯೆ ನಾಮ ನಿರ್ದೇಶಂಗಳ್ || ೫೮ ||

ಮೊದಲುಂ ನಡುವುಂ ಕಡೆಯುಂ |
ತುದಿಯುಂ ಬೇಱಿಲ್ಲವೆಂಬುದೆಂಗಾ ನಯವುಂ ||
ವದನಂ ಗಾತ್ರಂ ಬಾಲಂ |
ಕುದಿರೆಯ ಬೆನ್ನೆಂಬಿವುಂ ಶರೀರಾಂತರದೊಳ್ || ೫೯ ||

ವದನದ ಮುಂಗಾಲೆರಡಱ |
ತುದಿಯಿರ್ದೆಡೆ ಪೂರ್ವಕಾಯಮದಱಿಂ ತಿಕದಿಂ ||
ದೊದವಿರೆ ಮಧ್ಯಂ ಕಾಯುವು |
ಮದಱಿಂ ಪೆಱಗಿಂತು ಕಾಯನಿರ್ದೇಶಂಗಳ್ || ೬೦ ||

ಕಂ|| ಶಿರಮುಂ ಕಣ್ಣುಂ ಮುಖಮುಂ |
ಕೊರಲುಂ ಕಿವಿಯುಂ ವೃಷಣಮುದುಂ ಮೇಹನಮುಂ ||
ಚರಣಂಗಳುಮಿರ್ಕೆಲನುಂ |
ತುರಗಕ್ಕಂ ಘೋಟಿಗೆಗಮಿವು ದಶಸ್ಥಾನಂಗಳ್ || ೬೧ ||

*ಇದು ಲಲಿತ ವಚನರಚನಾ |
ಪ್ರದೇಶ ನಾಮಾಭಿಧಾನ ಹಯಶಾಸ್ತ್ರ ತ |
ತ್ವದ ವೊಂಬತ್ತನೆಯಧ್ಯಾ |
ಯದ ವಿರಚನೆ ಚಂದ್ರಮತಮಿಳಾವಳಯಹಿತಂ || ೨೬ ||

ಇಂತು ನವಮಾಧ್ಯಾಯಂ

*ಈ ಪದ್ಯವಿಲ್ಲದೆ ಅಧ್ಯಾಯದ ಸಂಖ್ಯೆಯೂ ಇಲ್ಲದೆ ಆಚಾರ್ಯಂ ಶಿಷ್ಯನ–ಎಂಬ ಪದ್ಯವು ಒಂದು ಪ್ರತಿಯು ಆರಂಭಿಸಿದೆ.

## ಅಂಗಭೇದ ಪ್ರದೇಶನಾಮ*

ಕೆಳಗಣ ಮೇಲಣ ಪಲ್ಗಳ ಬೇರ್ಗಳಂ ಪಿಡಿದಿ(ಹಸಂದು)ಪೊರ್ಸಡುಗಳ್ಗೆ ದಂತಪೀಠಿಕೆಯೆಂಬ ಪೆಸರಕ್ಕುಂ. ಅಣಲ ಪಲ್ಗಳ ಮೇಲ(ಗ)ಣ ಕದಪುಗಳ್ಗೆ ಗಂಡಮೆಂಬ ಪೆಸರಕ್ಕುಂ, ಕಟವಾಯ ಸಂಧಿಗಳ್ ಸೃಕ್ವಿಣಿಯಕ್ಕುಂ ಎರಡುಮಣಿಗೆಯೊಳಗಣ ಭಾಗದ ನಡುವಣ ಪ್ರದೇಶಕ್ಕೆ ಜಿಹ್ವಾಬಂಧವೆಂಬ ಪೆಸರಕ್ಕುಂ. ಅಣಲ ಪಲ್ಗಳಿಂದೆಡೆಯೊಳಾದ ದಾಡೆಯ ಹಲ್ಲಿಗೆ ದಂಷ್ಟ್ರವೆಂಬ ಪೆಸರಕ್ಕುಂ. ಜಿಹ್ವೆಯಿಂ ಮೇಲೆ ತಾಲುಗೆಯೆಂಬ ಪೆಸರಕ್ಕುಂ, ತಾಲುಗೆಯಿಂ ಕೆಳಗೆ ಸೂಜಿ(ಚಿ)ಯೆಂಬ ಪೆಸರಕ್ಕುಂ. ಅಲ್ಲಿಂ ಮೇಲೆ ತಾಲುಗೆಯ ತೆರೆಗಳುಂ ಮೂವತ್ತೆರಡಕ್ಕುಂ, ಅವರ್ಕೆ ಕೂರ್ಮೆಗಳೆಂಬ ಪೆಸರಕ್ಕುಂ. ಆ ತೆರೆಗಳ ನಡುವಣರೇಖೆಗಳ್ಗೆ ರಾಜಿಗಳೆಂಬ ಪೆಸರಕುಂ, ಆ ತೆರೆಗಳ್ ಮೇಗಣರೇಖೆ ತಾಳುವಂಶವೆಂಬ ಪೆಸರಕ್ಕುಂ. ಅಣುಗೆಯೊಳಗೆ ಪುಟ್ಟಿದಣಲಪಲ್ಗಳ್ಗೆ ದಂತವೆಂಬ ವೆಸರಕ್ಕುಂ, ಕಡೆಯಪಲ್ಗಳ್ ನಾಲ್ಕಕ್ಕಂ ಪಾರಿಪಕ್ಷ(ಕ್ಷ)ವೆಂಬುದು, ನಡುವಣ ಪಲ್ನಾಲ್ಕಕ್ಕಂ ಮಧ್ಯಮವೆಂಬ ಪೆಸರಕ್ಕುಂ. ಮುಂಬಲ್ಲು ನಾಲ್ಕಕ್ಕಂ ಸಂದಂಸ(ಶ)ವೆಂಬ ಪೆಸರಕ್ಕುಂ, ಮೇಗಣ ಪಲ್ಗ(ಲ್ಲ)ಗ್ರದಂತವೆಂಬ ಪೆಸರಕ್ಕುಂ. ಪಲ್ಲಪೊಱಗು ಬಾಹ್ಯವೆಂಬ ಪೆಸರಕ್ಕುಂ, ಒಳಗು ಅಭ್ಯಂತರವೆಂಬ ಪೆಸರಕ್ಕುಂ. ತುದಿಗಳಗ್ರವೆಂಬ ಪೆಸರಕ್ಕು, ಮೊದಲ್ಗೆ ಮೂಲವೆಂಬ ಪೆಸರಕ್ಕುಂ. ಪಲ್ಗಳತುದಿ ಮೊದಲು ಪೊಱಗೊಳಗು ಸಮಭಾಗಮೆಲ್ಲಕ್ಕಮೊಂಧೆತೆಱನಕ್ಕುಂ, ಪಲ್ಗಳಂ ಮುಚ್ಚಿರ್ಪ ಮೇಲಣ ಪ್ರೋಥಕ್ಕೆ ಓಷ್ಠವೆಂಬ ಪೆಸರಕ್ಕುಂ. ಅಧರೋಷ್ಠಕ್ಕೆ ಚಿಬುಕೆಯೆಂಬ ಪೆಸರಕ್ಕುಂ, ಉತ್ತರೋಷ್ಠದ ನಡುವೆ ಪ್ರಪಾನವೆಂಬ ಪೆಸರಕ್ಕುಂ. ಪ್ರಪಾನದಿಂ ಮೇಲೆ ಪ್ರೋಥವೆಂಬ ಪೆಸರಕ್ಕುಂ, ಪ್ರೋಥದೆರಡುಂ ಕೆಲನಮೂಗಿನತುದಿಗೆ ನಾಸಾಪುಟವೆಂಬ ಪೆಸರಕ್ಕುಂ. ಪ್ರೋಥದ ಕಣ್ಣೆಡೆಗೆ ಘ್ರಾಣವೆಂಬ ಪೆಸರಕ್ಕುಂ, ಮೂಗಿನ ಕಂಬಿಗೆ ನಾಸಾವಂಶವೆಂಬ ಪೆಸರಕ್ಕುಂ. ಮೂಗಿನೊಳಗು ಶ್ವಾಸಮಾರ್ಗವೆಂಬ ಪೆಸರಕ್ಕುಂ, ಕಣ್ಗಳ ಮೊದಲ್ಗಳ್ಗ(ಸ್ರು)ಶ್ರುಪಾತವೆಂಬ ಪೆಸರಕ್ಕುಂ. ಅ(ಸ್ರು)ಶ್ರುಪಾತದಿಂ ಮೇಗಣಣ್ಗೆ ಅಕ್ಷಿಗಳೆಂಬ ಪೆಸರಕ್ಕುಂ, ಕಣ್ಣಂ ಮುಚ್ಚಿರ್ಪ ಪೊ(ಱೆ)ಟ್ಟಿಗಳ್ಗೆ ವರ್ಕಣಿ ಎಂಬ ಪೆಸರಕ್ಕುಂ. ಅಲ್ಲಿ ಪುಟ್ಟಿದೆವೆಗಳ್ಗೆ ಅ(ಪ)ಕ್ಷಿ(ಕ್ಷ್ಮ)ಣಿ ಎಂಬ ಪೆಸರಕ್ಕುಂ, ಕಣ್ಣೊಳಗಣ ಬಿಳಿಯಾಲಿಗಳ್ಗೆ ಶುಕ್ಲವೆಂಬ ಪೆಸರಕ್ಕುಂ. ಶುಕ್ಲಭಾಗದ ನಡುವೆ ಕಪ್ಪಿರ್ಂಗೆ ಕೃಷ್ಣಭಾಗವೆಂಬ ಪೆಸರಕ್ಕುಂ, ಕೃಷ್ಣಭಾಗದ ನಡುವಣ್ಗೆ ದೃ(ವೃ)ಷ್ಟಿಭಾಗವೆಂಬ ವೆಸರಕ್ಕುಂ. ಕಣ್ಣಪೊ(ಱೆ)ಟ್ಟೆಯಮೇಗಣ್ಗೆ ಅಕ್ಷಿಕೂಟವೆಂಬ ಪೆಸರಕ್ಕುಂ, ಅಕ್ಷಿಕೂಟದಿಂ ಪೊಱಗಣ ಪುರ್ಬಗಳ್ಗೆ ಬಭ್ರುವೆಂಬ ಪೆಸರಕ್ಕುಂ. ಪುರ್ಬಿನ ನಡುವೆ ಭ್ರುಕಟಿಯೆಂಬ ಪೆಸರಕ್ಕುಂ, ಕಣ್ಣಮೊದಲ ಮಾಂಸದ(ಕಡೆಯಿಂದ)ಕೆಂಪಿಂಗೆ ಕಣ್ಣೀರವೆಂಬ ಪೆಸರಕ್ಕುಂ, ಕಣ್ಣಿನ ಶುಕ್ಲಭಾಗದ ಸುಷಿರಕ್ಕೆ ಆಕಾಶವೆಂಬ ಪೆಸರಕ್ಕುಂ. ಕಣ್ಣ ಪೊಱಗಣ ಕಡೆಗಳ್ಗೆ ಅಪಾಂಗವೆಂಬ ಪೆಸರಕ್ಕುಂ, ಸ್ತುವದ ಪುರ್ಬಿನ ಎಡೆಯ ನೊಸಲ್ಗಂ ಲಲಾಟವೆಂಬ ಪೆಸರಕ್ಕುಂ. ಲಲಾಟದಿಂಮೇಲೆ ಸ್ತುರಿವೆ(ಸುವೆ)ಯೆಂಬ ಪೆಸರಕ್ಕುಂ, ಎರಡುಂ ಕಿವಿಯೆಡೆಗೆ ಶಿ(ಸಿ)ರವೆಂಬ ಪೆಸರಕ್ಕುಂ, ಶಿರದಿಂ ನಡುವೆ ಮಸ್ತಕವೆಂಬ ಪೆಸರಕ್ಕುಂ, ಮಸ್ತಕದೆರಡುಂಕೆಲದ ಕಿವಿಗಳ್ಗೆ ಕರ್ಣಂಗಳೆಂಬ ಪೆಸರಕ್ಕುಂ. ಕಿವಿಯಮೊದಲ ಮುಂದಣ ರೇಖೆಗಳ್ಗೆ ಕರ್ಣಾಂಕುರವೆಂಬ ಪೆಸರಕ್ಕುಂ, ಕಿವಿಯೊಳಗಣ ಬಯಲ್ಗಳ್ಗೆ ಶ್ರೋತಾಸಿಯೆಂಬ ಪೆಸರಕ್ಕುಂ. ಕಿವಿಯಕಣ್ಣೆಡೆಗೆ[ಕ]ಟವೆಂಬ ಪೆಸರಕ್ಕುಂ, ಕಟದ ಕಡೆಗಂಣ ಸಮೀಪದ ಮೇಗಣ್ಗೆ ಶಂಖವೆಂಬ ಪೆಸರಕ್ಕುಂ. ಕಟದ ಸಂಕ(ಶಂಖ)ದ ಪೊಱಗಣ ಕೆನ್ನೆಗೆ ಹಾಟವೆಂಬ ಪೆಸರಕ್ಕುಂ, ಚಿಬು

---

*ಎರಡು ಪ್ರತಿಗಳಲ್ಲಿ ಪ್ರದೇಶನಾಮವನ್ನು ಹೇಳುವ ಕಂದಪದ್ಯಗಳಿಲ್ಲ, ಈ ಗದ್ಯ ಮಾತ್ರವಿದೆ. ಗ್ರಂಥಕರ್ತೃವು ಪದ್ಯಗಳನ್ನು ರಚಿಸಿದ್ದನೋ ಅಥವಾ ಈ ಗದ್ಯವನ್ನೇ ರಚಿಸಿದ್ದನೋ - ಎಂಬುದನ್ನು ನಿರ್ಧರಿಸಲು ಪ್ರಮಾಣವಿಲ್ಲದುದರಿಂದ ಈ ಗದ್ಯಭಾಗವನ್ನೂ ಇಲ್ಲಿ ಕೊಟ್ಟಿದೆ.

ಕದ ಮೇಗಣ್ಗಳ್ಗೆ ಹನುಮೆಂಬ ಪೆಸರಕ್ಕುಂ. ಹನವಿನ ನಡುವಣ ಕದಪುಗಳ್ಗೆ ಗಂಡಮೆಂಬ ಪೆಸರಕ್ಕುಂ, ಗಂಡದಪೊಱಗಣ ಪ್ರದೇಶಕ್ಕೆ ಹನುಚಕ್ರಮೆಂಬ ಪೆಸರಕ್ಕುಂ.

ಅಂತು ದಂತ ಪೀಠಿಕೆ ಮೊದಲಾಗಿ ಹನುಚಕ್ರಂತುದಿಯಾಗೆ ಅಂತರ್ಮುಖ ಬಹಿರ್ಮುಖ ಶಿರಃ ಪ್ರದೇಶಮನಾಶ್ರಯಿಸಿದ ಪ್ರದೇಶಂ ನಾಲ್ವತ್ತೆರಡಕ್ಕುಂ

ಮತ್ತಾಹ(ಮು)ಣಿಗೆಯು ಕೊರಳ ನಡುವಣ ಪ್ರದೇಶಕ್ಕೆ ನಿಗಳಮೆಂಬ ಪೆಸರಕ್ಕುಂ. ಕಿವಿಯ ಪೊಱಗಣ್ಗೆ ಬಿದುವೆಂಬ ಪೆಸರಕ್ಕುಂ, ಬಿದುವಿನ ಸಮೀಪದೆಡೆಗೆ ವಿದುರ್ಮಣಿಯೆಂಬ ಪೆಸರಕ್ಕುಂ. ಕಂಠನಾಳಿಯೆರಡುಂ ಕೆಲಕ್ಕಂ ಮನ್ಯು(ನ್ಯ)ವೆಂಬ ಪೆಸರಕ್ಕುಂ, ಮನ್ಯೂತ್ತರಿಯೆಡೆಯ ಪ್ರದೇಶಕ್ಕೆ ಗ್ರಿವಮೆಂಬ ಪೆಸರಕ್ಕುಂ. ಸ್ಕಂಧದಿಂ ಮೇಲಣ ವಲಯಕ್ಕೆ ಕೇ(ಶ)ಸರಮೆಂಬ ಪೆಸರಕ್ಕುಂ, ಕೇ(ಶ)ಶರದೆರಡುಂ ಕೆಲಕ್ಕಂ ಕೇಶಾಂತರಮೆಂಬ ಪೆಸರಕ್ಕುಂ,ಕಾಕಸಿಯೆಂದು ವಾಹಮೆಂಬ ಪೆಸರಕ್ಕುಂ, ಕಂಠದ ನಿಗಳದನಡುಗಳಮೆಂಬ ಪೆಸರಕ್ಕುಂ. ಕಕ್ಷಂಗಳ ನಡುಣ ಪ್ರದೇಶಕ್ಕೆ ಕಂಠಮೆಂಬ ಪೆಸರಕ್ಕುಂ.

ಅಂತು ನಿಗಳಂ ಮೊದಲಾಗೆ ಕಂಠವರಂ ಗ್ರೀವಮನಾಶ್ರಯಿಸಿದ ಪ್ರದೇಶಂ ಪನ್ನೊಂದಕ್ಕುಂ.

ಅಲ್ಲಿ ಕಂಠದಿಂ ಕೆಳಗೆ ಜತ್ರುವೆಂಬ ಪೆಸರಕ್ಕುಂ. ಅದಱಿಂ ಕೆಳಗೆ ವಕ್ಷಮೆಂಬ ಪೆಸರಕ್ಕುಂ, ವಕ್ಷದ ಹೃದುಯದೆಡೆ ಕ್ರೋ(ಡ)ಳಮೆಂಬ ಪೆಸರಕ್ಕುಂ.

ಅಂತು ವಕ್ಷಮನಾಶ್ರಯಿಸಿದ ಪ್ರದೇಶಮೆರಡ(ಮೂಱ)ಕ್ಕುಂ,

ಅಲ್ಲಿ ಕಕುದ ಸಂಬಂಧಿಯಪ್ಪ ಪಾರ್ಶ್ವಗಳ್ಗೆ ಯೆಸಯೆ(ಅಂಸಮೆ)ಂಬ ಪೆಸರಕ್ಕುಂ, ಅಂಶ(ಸ)ದ ಮೊದಲನಾಶ್ರಯಿಸಿದ ಮುಯ್ವು(ಮಯಿಪ್ಪು)ಗಳ್ಗೆ ದಾವಮೆಂಬ ಪೆಸರಕ್ಕುಂ. ವಕ್ಷದ ಹೃದಯದೆಡೆಗೆ ರಾವದಿಯೆಂಬ ಪೆಸರಕ್ಕುಂ, ರಾವದಿಯಿಂ ಕೆಳಗೆ ಬಾಹ್ಯಮೆಂಬ ಪೆಸರಕ್ಕುಂ, ಬಾಹ್ಯದ ಮೂಲದ ಕ್ರೋಡದೆಡೆಗೆ ಜಾಂಗಳಮೆಂಬ ಪೆಸರಕ್ಕುಂ, ಬಾಹ್ಯದೊಳಗಣ ಕಲೆಗಳ್ಗೆ ಕಿರಣಮೆಂಬ ಪೆಸರಕ್ಕುಂ, ಬಾಹ್ಯದ ಕೆಳಗಣ ಮೊಣಕಾಲ್ಗೆ ಜಾನುವೆಂಬ ಪೆಸರಕ್ಕುಂ. ಮೊಣಕಾಲಕಟಕಕ್ಕೆ ಪಾಳಿಯೆಂಬ ಪೆಸರಕ್ಕುಂ, ಅದಱಿಂ ಮೇಗಣ ಮಡಿಸಂದುಗಳ್ಗೆ ಜಾನುಮಂಜರಿಯೆಂಬ ಪೆಸರಕ್ಕುಂ. ಜಾನುವಿಂ ಕೆಳಗೆ ಜಂಘೆಯೆಂಬ ಪೆಸರಕ್ಕುಂ, ಜಂಘೆಯಿಂ ಕೆಳಗೆ ಪಳಿಹಸ್ತ(ತ್ರ)ಮೆಂಬ ಪೆಸರಕ್ಕುಂ. ಪಳಿಹಸ್ತ(ತ್ರ)ಮನಾಶ್ರಯಿಸಿದುದರ್ಕೆ ಕೂರ್ಚಮೆಂಬ ಪೆಸರಕ್ಕುಂ, ಕೂರ್ಚೆಯಿಂ ಪೊಱಗಣ ದೆಸೆಯ ಕೆಳಗಣ್ಗೆ ಕಳೆ(ಳ)ಯೆಂಬ ಪಸರಕ್ಕುಂ. ಕಳೆ(ಳ)ಯರಡುಂ ಕೆಲಂಗಳುಂ ವಿಹಿಕೆ(ಮಿಷಿರೆ)ಯೆಂಬ ಪೆಸರಕ್ಕುಂ, ಖುರದಿಂ ಕೆಳಗೆ ಪಾರ್ಷ್ಣಿ ಶೀರ್ಷಮೆಂಬ ಪೆಸರಕ್ಕುಂ. ಖುರದ ಸಂಧಿಗಳಂ ಬಿ(ಖ)ಸಿಸಮೆಂಬ ಪೆಸರಕ್ಕುಂ ಖುರದ ನಡುವೆ ತಳಮೆ(ಯೆ)ಂಬ ಪೆಸರಕ್ಕುಂ. ತಳದ ನಡುವಣ ತ್ರಿಕೋಣರೇಖೆಗೆ ಮಂಡೂಕಿಯೆಂಬ ಪೆಸರಕ್ಕುಂ, ಅದಂ ಪೊರ್ದಿ ಪೊಱಗಿರ್ದುದು ಕ್ಷೀರಿಕೆಯೆಂಬ ಪೆಸರಕ್ಕುಂ.

ಅಂತು ಜಂಘೆಯಿಂ ಕೆಳಗೆ ಮುಂತಣ ಪಿಂತಣಕಾಲ್ಗಳ್ಗಂ ಪ್ರದೇಶನಾಮಮೊಂದೆ ತೆಱನಕ್ಕುಂ. ಅಂಸಂ(ಮಾಂಸಂ) ಮೊದಲಾಗಿ ಕ್ಷೀರಿಕೆವರಂ ಪೂರ್ವ ಭಾಗಮನಾಶ್ರಯಿಸಿದ ಪ್ರದೇಶಮಿರ್ಪತ್ತೊಂದಕ್ಕುಂ.

ಅಲ್ಲಿ ಕ್ರೋಳದ ನಾಭಿಯ ಎಡೆ ಹೃದಯಮೆಂಬ ಪೆಸರಕ್ಕುಂ, ಹೃದಯದ ಕ್ರೋಳದೆಡೆಗೆ ನಾಭಿಯೆಂಬ ಪೆಸರಕ್ಕುಂ. ನಾಭಿಯ ಶಿಶ್ನೆಯೆಡೆ ಜಠರಮೆಂಬ ಪೆಸರಕ್ಕುಂ, ಬಾಹುಮೂಲದ ಪೊಱಗಣ ಕುಳಿಗೆ ಕಕ್ಷಮೆಂಬ ಪೆಸರಕ್ಕುಂ. ಅಸನದಿಂ ಕೆಳಗಣ ಬದಿ(ರಿ)ಗಳ್ಗೆ ಕೋಷ್ಠಮೆಂಬ ಪೆಸ

ರಕ್ಕುಂ, ಕೋಷ್ಠದಿಂ ಕೆಲದಳ್ಳಿಗಳ್ಗೆ ಕುಕ್ಷಿಯೆಂಬ ಪೆಸರಕ್ಕುಂ. ಕುಕ್ಷಿಯಿಂ ಪೊಱಗೆ ಕೆಳಗಣ ಭಾಗಂ ಕಕುಸಂಧಿಯೆಂಬ ಪೆಸರಕ್ಕುಂ, ಕಕುಸಂಧಿಯೆಡೆ ರಂಧ್ರಮೆಂಬ ಪೆಸರಕ್ಕುಂ. ರಂಧ್ರದ ನಾಭಿಯೆಡೆಗೆ ಉಪರಂಧ್ರಮೆಂಬ ಪೆಸರಕ್ಕು, ರಂಧ್ರದ ಉಪರಂಧ್ರದ ನಡುವೆ ಮೇಖಲೆಯೆಂಬ ಪೆಸರಕ್ಕುಂ. ಹೃದಯದ ನಾಭಿಯ ಮೂತ್ರಕೋಶದ ನಡುವೆ ನೀಳ್ದ ಬಾಸೆಯ ರೋಮಕ್ಕೆ ರೋಮರಾಜಿಯೆಂಬ ಪೆಸರಕ್ಕುಂ, ಕಕುದ ರೋಮರಾಜಿಯೆಡೆಗೆ ಕಾಕಸಿಯೆಂಬ ಪೆಸರಕ್ಕುಂ. ಕಾಕಸಿಯ ಆಸನದ ನಡುವೆ ಕಕುದಮಧ್ಯಮೆಂಬ ಪೆಸರಕ್ಕುಂ, ಕಕುದದಿಂ ಪೊಱಗೆ ಆಸನಮೆಂಬ ಪೆಸರಕ್ಕುಂ. ಆಸನದಿಂ ಪೊಱಗೆ ಪೃಷ್ಠಮೆಂಬ ಪೆಸರಕ್ಕುಂ, ಅದಱ ನಡುವಣ ನಿಟ್ಟೆಲ್ವಿಂಗೆ ಮಲಕೂ(ಕು)ಟತ್ರಿಕಂ(ಕ)ಮೆಂಬ ಪೆಸರಕ್ಕುಂ. ತ್ರಿಕದೆರಡುಂ ಕೆಲಕ್ಕುಂ ರೋಹಿಣಿಸಂಧಿಯೆಂಬ ಪೆಸರಕ್ಕುಂ, ಅಲ್ಲಿಂ ಕೆಳಗೆ ಪಾಂಡುಸಂಧಿಯೆಂಬ ಪೆಸರಕ್ಕುಂ. ಜಘನದಿಂ ಕೆಳಗಣ ಬಾಲಂ ಪುಚ್ಛದಂಡಮೆಂಬ ಪೆಸರಕ್ಕುಂ, ಬಾಲದಕೆಳಗು ತಗರಿಯೆಂಬ ಪೆಸರಕ್ಕುಂ. ಅದರ ಕೆಲಂಗಳ್ಗೆ ವೃತ್ತಿಯೆಂಬಪೆಸರಕ್ಕುಂ, ವೃತ್ತಿಯಿಂ ಕೆಳಗೆ ರೋಮಸ್ಥ(ಸ್ಪ)ನಮೆಂಬ ಪೆಸರಕ್ಕುಂ. ಬಾಲದಂಡೆಗೆ ವಾಲದಂಡಮೆಂಬ ಪೆಸರಕ್ಕುಂ, ಬಾಲದ ಮಱೆಯಲಿರ್ಪುದು (ಅ)ಪಾನಮೆಂಬ ಪೆಸರಕ್ಕುಂ, ಆ(ಅ)ಪಾನದೆರಡುಂ ಕೆಲಕ್ಕುಂ ಸ್ಫಿಕ್‌ಪಿಂಡಮೆಂಬ ಪೆಸರಕ್ಕುಂ. ಅದರ ಕೆಲಂಗಳ್ಗೆ (ಭ)ಚಡು(ಟು)ಳೆಯೆಂಬ ಪೆಸರಕ್ಕುಂ. ಅಪಾನದಿಂ ಕೆಳಗೆ ಶಕ್ತಿಶಿವನಿಯೆಂಬ ಪೆಸರಕ್ಕುಂ, ಶಕ್ತಿಶಿವನಿಯ ಮುಷ್ಕದೆಡೆಗೆ ವಂಕ್ಷಣಮೆಂಬ ಪೆಸರಕ್ಕುಂ. ಶಕ್ತಿಶಿವನಿಯ ಕೋಶದೆಡೆ ಮೇಘೆ(ಹ)ಯೆಂಬ ಪೆಸರಕ್ಕುಂ, ಮುಷ್ಕದ ನಾಭಿಯೆಡೆಗೆ ಶಿಶ್ನಮೆಂಬ ಪೆಸರಕ್ಕುಂ. ಶಿಶ್ನದ ತುದಿವ(ಳಿ)ಳೆಗೆ ಕುಣಿ(ಕರ್ಣಿ)ಕೆಯೆಂಬ ಪೆಸರಕ್ಕುಂ, ಆ ಮೂತ್ರಂ ಬರ್ಪೆಡೆಗೆ ಶಿಶ್ನದ್ವಾ(ದಾ)ರಮೆಂಬ ಪೆಸರಕ್ಕುಂ. ಮೂತ್ರದ ಕೋಶದ ಸಿಂಧದ ಕೆಳಗೆ ಅಂಡವಾ(ಜಾ)ತಮೆಂಬ ಪೆಸರಕ್ಕುಂ, ಸ್ತುರೆಯ ಮೇಗಣ್ಗೆ ಚಂದ್ರಶಕ್ತಿಯೆಂಬ ಪೆಸರಕ್ಕುಂ. ರೋಹಿಣೀ ಸಂಧಿಯ ಕೆಳಗೆ ಕಾಸುಳಮೆಂಬ ಪೆಸರಕ್ಕುಂ. ಶಕ್ತಿಶಿವನಿಯ ಪಾನದ ನಡುವೆ ಯುಗಸಂಧಿಯೆಂಬ ಪೆಸರಕ್ಕುಂ. ಯುಗಸಂಧಿಯ ಕೆಳಗಣ್ಗೆ ಶಕ್ತಿಶಕುನಿಯೆಂಬ ಪೆಸರಕ್ಕುಂ. ಆ ಪಾಂಡು ಪಿಂಡಿಯ ಕೆಳಗೆ ಊರು(ಕ)ವೆಂಬ ಪೆಸರಕ್ಕುಂ. ಊರುವಿನ ಕಣದೆಡೆಗೆ ಉಪಾಂಡು(ತ)ಪಿಂಡಮೆಂಬ ಪೆಸರಕ್ಕುಂ, ಚಕ್ರಶಕ್ತಿಯಕೆಳಗೆ ಜಂಘೆಯೆಂಬ ಪೆಸರಕ್ಕುಂ. ಶಕ್ತಿಯಿಂ ಕೆಳಗೆ ಮಂಜರಿಯೆಂಬ ಪೆಸರಕ್ಕುಂ, ನಡುವೆ ಶಂಖಮೆಂಬ ಪೆಸರಕ್ಕುಂ. ಸ್ತು(ರಿ)ವೆಯುಂ ಕೆಳಗೆ ಜಂಘೆಯೆಂಬುದಱ ಮೇಗಣ ಕಲೆಗಳ್ಗೆ ಕಿಣಮೆಂಬುದು ಪೆಸರಕ್ಕುಂ. ಗೋಳಿಗೆಯ ಕೆಚ್ಚಲ ಮೇಗಣ ಮೊಲೆಯುಂ ಸ್ತನಮೆಂಬುದು ಅವುಗಳ ತುದಿಗಳಂ ಸ್ತನಚ್ಛಿದ್ರಮೆಂಬುದು ಶಿವನಿಯ ಪಾನಿಯ(ನದ) ನಡು ಯೋನಿಯೆಂಬುದು.

ಅಂತು ತ್ರಿಕಂ ಮೊದಲಾಗಿ ಯೋನಿವರ ಮೆಡೆಯೊಳಾದ ಪ್ರದೇಶಂ ಗೋ(ಘೊ)ಱಗೆಗೆ ಮೂತ್ತುಮೂಱು ಪರಭಾಗದೊಳಮಕ್ಕುಂ.

# ದಶಮಾಧ್ಯಾಯಂ

## ಗುರುಶಿಷ್ಯ (ವೈದ್ಯ) ಲಕ್ಷಣಂ

ಕಂ|| ಆಚಾರ್ಯಂ ಶಿಷ್ಯನ ಶೀ |
ಲಾಚಾರಮನಱಿತು ಶಿಕ್ಷೆಗೆಯ್ವುದು ತತ್ಪೂ |
ರ್ವಾಚಾರ್ಯವಿರಚಿತಮಿದು ದು |
ರಾಚಾರಂಗೀಯಲಾಗದಶ್ವಾಗಮಮಂ || ೧ ||

ಮ|| ಗುರನಿಂದ್ಯಂ ಕೃತನಾಶಿ ಶೂನ್ಯಹೃದಯಂ ನಿರ್ಲಜ್ಜನಜ್ಞಾನಿ ನಿ |
ಷ್ಠುರನಾಲಸ್ಯನರೂಪಿ ಕೋಪಿ ಪರದಾರಾರೋಹಕಂ ಮದ್ಯಪಾ ||
ನರತಂ ಕುತ್ತ್ರವಳಂ ವಿಕಾರಿ ಬಧಿರಂ ನಿರ್ಲಕ್ಷಣಂ ನಿರ್ವಿಚಾ |
ರರತಂಗೀವುದಯುಕ್ತಮಲ್ತೆ ಹಯಶಾಸ್ತ್ರಾರ್ಥೋಕ್ತಿಯಂ ವ್ಯಕ್ತಿಯಿಂ || ೨ ||

ಮ|| ಗುರಭಕ್ತಂ ಕುಲಜಂ ಪ್ರಸನ್ನವದನಂ ಮೇಧಾವಿ ಸದ್ಧರ್ಮತ |
ತ್ಪರ [1]ನವ್ಯಾಧಿತಚಿತ್ತನಸ್ಯರಮಣೀದೂರಂ [2]ಕೃತಜ್ಞಂ ಸ್ಥಿರಂ ||
ನಿರುಜಂ ಸರ್ವಜನೋಪಕಾರಿ ಶುಚಿ ಸದ್ವಾಕ್ಯಂ ನಿರಾಲಸ್ಯರ |
ಪ್ಪರನಾರಯ್ದುಪದೇಶಮಂ ಕುಡುವುದಶ್ವಾಚಾರ್ಯರಾಜೋತ್ತಮಾ || ೩ ||

ಕಂ|| ತಿರಿದುಂಡಲಸದೆ ಕರ್ಪಡ |
ಪರಿಕರನಾಗಿರ್ದು ಗಂಧಮಾಲ್ಯಾದಿಗಳಂ |
ಪರಿಹರಿಸಿ ಜಿತೇಂದ್ರಿಯನಾ |
ಗಿರೆ ಶಿಷ್ಯಂ ಸಕಲಪಾಲಕಂ ತಾನಕ್ಕುಂ || ೪ ||

*ತುರುಗದ ವ್ಯಾಧಿನಿಧಾನವ |
ನಱಿಯದ ವೈದ್ಯನನೆ ಶಿಕ್ಷೆಗೆಯ್ಯದ ನೃಪಗಂ ||
ತುಱುಗುವುದಶ್ವೇತಿ ಪಾತಕ |
ಮಱಿದವನಂ ತಡೆಯಲಶ್ವಮೇಧದ ಫಲಮುಂ || ೫ ||

ರಕ್ಷಕನಿವನಶ್ವಕೆ ಯೆಂ |
ದೀಕ್ಷಿಸಿ ಸಲಹಲಱಿಯದವನನರಸನೆನುತಾ ||
ಪೇಕ್ಷಿಸಿ ಬಯಸುವ ನಡವಿಯ |
ಮಕ್ಷಿಕವ ಪಿಡಿದಿರೆ ಸಲಹದೇ ಮಧುವಿತ್ತುಂ || ೬ ||

---

1 ನುತ್ಪಾಟಿತಚಿಂತ್ಯನಸ್ಯ    2 ಶ್ರುತಜ್ಞಾನಿಸ್ಥಿರಂ

*ಒಂದುಪ್ರತಿಯಲ್ಲಿ ಅಶ್ವವೈದ್ಯನ ಗುಣಶೀಲಗಳನ್ನು ಹೇಳುವ ಈ ೧೩ ಪದ್ಯಗಳಿವೆ. ಇವುಗಳಲ್ಲಿ ಹೊಸಗನ್ನಡ ಪ್ರಯೋಗಗಳೂ ಕಂದದ ಛಂದೋದೋಷವೂ ವಿಶೇಷವಾಗಿರುವುದಱಿಂದ ಅನ್ಯಕೃತವೆಂದು ತೋಱುವುದು.

ಕಂ|| ಕಾಲಾಕಾಲಮನಱಿದುಂ |
ಪಾಲನೆಯಿಂದಶ್ವಚಯವ ಸಲಹುವ ವೈದ್ಯನ ||
ಪಾಲಿಸದವ ನೃಪನಹನೇ |
ಬಾಲರ್ ಮೊದಲಾಗಿಯುರಸನೆಂಬುದು ಸಹಜಂ || ೭ ||

ಉರಿವರಿದುಬೇವ ಸಮಯದೆ |
ಭರದಿಂ ನೀರ್ಗುಡಿವೆನೆಂಬ ಹೆಡ್ಡನತೆಱದಿಂ ||
ತುರಗದ ವ್ಯಾಧಿಗೆ ಅಡವಿಯು |
ಮರಗಿಡುಬಳ್ಳಿಗಳನರಸುವವನಾತೆಱನೈ || ೮ ||

ಕಾಲದೊಳೆ ತಿಳಿದುಮಶ್ವಕೆ |
ಪಾಲನೆಯುಹ ಮರ್ದನಱಿದು ಕೂಡಿಯೆ ತೊಡಕಿನ ||
ಕೀಲನಱಿದೊಡನೆ ಮಾಡುವ |
ಲಾಲನೆಯುಱುವವನೆ ವೈದ್ಯ ವಿಬುಧರ ಮತದಿಂ || ೯ ||

ಕೂಡಿರಿಸಿ ಮರ್ದನೆಲ್ಲವ |
ಬೇಡಿದ ಪದದೊಳಗಮೊಲಿದು ಕುಡು ಹಯಕುಲಕಂ ||
ಙೋಡಗನಕ್ಕಲ್ಲದೊಡಂ |
ಕಾಡೊಳ್ ತಿರಿತಿಂಬೆನೆಂಬ ಹೆಡ್ಡನ ತೆಱದಿಂ || ೧೦ ||

ಒಂದುತುರಗವಂ ಕೊಂದಗೆ |
ಬಂದುದು ಅಯ್ದುಙೊಳೆ ಮೊದಲ ಪಾತಕವವಗಂ ||
ಬಂಧಿಸಿ ಕುದುರೆಯು ಸಾಕದೆ |
ಕೊಂದಗೆ ಪಾತಕಮೆನಿತ್ತೊ ಕುಱುಪಿಡಲಱಿಯೆಂ || ೧೧ ||

ಬಱುಮಾತನಾಡಿ ವೈದ್ಯದ |
ತೆಱನಂ ವ್ಯಾಧಿಗಳ ಪೆಸರ ಕುಱುಪಿಡಲಱಿಯದ ||
ಕಱುಗಾಹಿ ವೈದ್ಯನವನು (ಕ್ಕು)ಂ |
ಬಱುಗಪ್ಪೆಯುಪೋಲೊಱಲ್ದು ಹರಣವಿಡುವತೆಱಂ || ೧೨ ||

ವ್ಯಾಧಿಯ ಪೆಸರಂ ಕುಱುಹಂ |
ಸಾಧಕರಱುವಂತೆ ಪೇೞ್ದೆ ಬಲ್ಲನಿತನಿವಂ ||
ಓದಿಯೆ ತಪ್ಪುಳ್ಳೊಡಿನಿತ |
ಭೇದಿಸಿ ತಿರ್ದುವುದು ಬಲ್ಲ ಸದ್ಬುಧನಿವಹಂ || ೧೩ ||

(ಶೂಲೆಗೆ)

ಮಸಗಿದೊಡೆ ಶೂಲೆ ಬಾತೊಡೆ |
ಬಸಿಱತಿಕೃಶವಾಗೆ ತನು ಗುದಾಭ್ಯಂತರಮುಂ ||
ಪೊಸೆಯೆ ಪಟು ವಾಜಿ ಮೋಹಂ |
ಬಸಿಪೊಡಮಿನಿತುಂ ತೆಱಕ್ಕಮೊಂದನೆ ಪೇೞ್ವೆಂ || ೧೪ ||

ಕಂ|| ಕುಡುವುದು ಪಸುವಿನ ಪಾಲಂ |
ಪಡೆಯದೊಡೂಡುವುದು ಮದ್ಯಮಂ ಮತ್ತನಿಸಂ ||
ತಡೆದು ಹಯಕ್ಕನುನಯದಿಂ |
ಕುಡುವುದು ಗೋಮೂತ್ರಮಿಶ್ರಿತಂ ಭೋಜನಮಂ || ೧೫ ||

ಸರುಷಪಮಂ ಘೃತಮಂ ನಾ |
ಗರಮಂ ಪಿಪ್ಪಲಿಯನಮಳಸೈಂಧವಮಂ ವಿ ||
ಸ್ತರದಿಂ ತ್ರಿಫಲಾರಸದೊಳ್ |
ನಿರೂಹಣಕ್ರಿಯೆಗೆ ಯೋಜಿಪುದು ಧುರದೆಡೆಯೊಳ್ || ೧೬ ||

ಎರಡುಂ [1]ಬಾಳಂ ಮಧುಕಂ |
ಸುರದಾರ ಸುಗಂಧಿ ಕಾರಸೆ ಶ್ರೀಖಂಡಂ(ಗಂಧಂ)ಶ ||
ರ್ಕರೆಯುಂ ನೆಯ್ದಿಲ ಗೆಡ್ಡೆಯು |
ನರಿದವಱಿಂ ಕ್ಷೀರವರ್ತಿಕೆಯನನುನಯದಿಂ || ೧೭ ||

ವರುಷದ ಮಱಿಗೊಬ್ಬಳಮಾ |
ಗಿರೆ ಯೋಜಿಪುದೆಱಿಗೆ ನಾಲ್ಕುವರ್ಷಂಬರ ಮಾ ||
ದರದಿಂ ಬಱಿಕೊಕ್ಕಳಮದು |
ಪರಿಮಿತಮತಿಕೃಶಮನಱಿದು ಕುಡುಗೊಬ್ಬಳಮಂ || ೧೮ ||

ಚತುರಂಗುಲಪ್ರಮಾಣೋ |
ಚ್ಛ್ರಿತ ಮಪ್ಪುದು ನೇ(ವೇ)ತ್ರನಾಳಿ ತತ್ಸುಷಿ(ಸಿ)ರಂ ಪ್ರ ||
ಸ್ತುತ ಮಂಗುಲ ಪ್ರಮಾಣಾ |
ಕೃತಿಯಾಗಿ ನಿರೂಹ ಕರ್ಮಣಕ್ಕುಪಯೋಗ್ಯಂ || ೧೯ ||

ಹಯಮಂ ಶ್ರಮಮಂ ಕಾಲ |
ತ್ರಯಮುಮನಾರಯ್ದು ಮೂಱುದೆವಸಂಬರ(ಮೆ) ಬೆ ||
ಣ್ಣೆಯನಿಕ್ಕಿ ನೇತ್ರನಾಳಿಯ |
ಕ್ರಿಯೆಯಿಂದೆ ಸುವಾಸನಾಮುಮನಲೋದ್ದಾಮಂ || ೨೦ ||

(ಶೋಫಕ್ಕೆ ಸೇಕಲಕ್ಷಣಂ)

ತುಲಸಿಯ ನುಗ್ಗಿಯ ತಗ್ಗಿಯ |
ಬೆಳೆದಾವುಡಲದಗುಯ ಕಕ್ಕಯೆಕ್ಕಯ ಪತ್ರಂ ||
ಗಳನೊಡನೆ ತೆಗಪಿ ಕೊಂಡದ |
ಱೊಳೆ ಸೇಕಂಗೆಯ್ಯೆ ಪತ್ರಸೇಕಂ ದಿವ್ಯಂ || ೨೧ ||

[1] ಬೆಳ್ಳಂ

ಕಂ|| ಪುರಿವುದು ಕಡುಬಿಸಿಯಪ್ಪಂ |
ತಿರೆ ಮಳಲಂ ನಾಂದ ಸೀರೆಯೊಳ್ ಪೊಯ್ದು ನಯಂ ||
ಬೆರಸಿರೆ ಸೇಕಂಗೆಯ್ವುದು |
ತುರಗದ *ಸೋಬ(ಫ)ಕ್ಕೆ ಮಳಲಸೇಕಂ ಯೋಗ(ಗ್ಯ)ಂ || ೨೨ ||

ಕಡುಮಱೆಯೊಳ್ ಕಡುಗಾಳಿಯೊ |
ಳಿಡೆಯುಡುಗದೆ ಸುರಿವ ಸೋನೆಯೊಳ್ ಕಪ್ಪುರ(ದಿ)ಮಂ ||
ಸುಡುವುದು ತುರಗಂ ಬಾಹಾ |
ದೆಡೆಯೊಳ್ ಸೇಕಿಸುಗೆ ಕಾಲಯೋಗ್ಯಂ ಸೇಕಂ || ೨೩ ||

ಇಭದೊಟ್ಟೆಯ ತುರಗದ ಗ |
ರ್ದಭದ ಪುರೀಷಂಗಳೊಡನೆ ಚಿಕ್ಕಣಿ ಗೆ[1]ಸಱುಂ ||
ಕ್ಷುಭಿಯಿಸಿ ಮಱಸದಮುಮನಱು |
ದಭಿಲಿಪ್ತಂಗೆಯ್ಗೆ ಸೇಕಿಸಲ್ತ್ರಿಕ್ಕೆಡೆಯಂ || ೨೪ ||

ಜ್ವರಮತಿಸಾರಂ ಕ್ರಿಮಿ ನಿ|
ಷ್ಠುರಭಾ(ರಂ)ರಾಕ್ರಾಂತಭಗ್ನಮೂರ್ಧ್ವಶ್ವಾಸಂ ||
ಪರಿಹೃದ(ದೆ)ಯುಮೆನಿಪ ಚಿಹ್ನಂ |
ವಿರಚಿಸುತಿರೆ ಮಾಡಲಾಗ ಸೇಕಕ್ರಿಯೆಯಂ || ೨೫ ||

(ಅಗ್ನಿಕ್ರಿಯೆ)

ಮೃದುನಾಭಿಯ ನಿಟ್ಟೆಲುವಿನ |
ಹೃದಯದ ಮೇಲಡಸಿ ಬರೆಯಲಾಗದು ವಿದ್ಯಾ ||
ವಿದರಿತ್ತಾನುಂ ಬರೆದಂ |
ದದು ಮಾಟ್ಕುಮಪಾಯಮಂ ಮನಸ್ತಾಪಮುಮಂ || ೨೬ ||

ಬರೆಯಿಡುವೊಡೆ ಪೆಱವೆಡೆದೊಳ್ |
ಖರಕಿರಣನ ಸಜ್ಜಶಾಂಕರೇಖಾಕೃತಿಯಿಂ ||
ಬರೆಯಿಡುವುದು ತುಪ್ಪಮನಾ |
ಬರೆಯೊಳ್ ಪೂಸುವುದು ಬರೆದ(ಯ)ಪುಣ್ ತೀವ್ರವಿನಂ || ೨೭ ||

ಸೆರೆಗಳಱುವತ್ತುನಾಲ್ಕುಂ |
ಪರಿಕಲಿಸಿರ್ಪುವು ತುರಂಗಮಾಂಗೋಪಾಂಗಾಂ ||
ತರದೊಳವಱೊಳಗೆ ಭಾವಿಸಿ |
ಸೆರೆಯಿ(ವಿ)ಡುವುದು ಪಂಚಸಿರೆಯೊಳನಿತುಂ ಸಾಧ್ಯಂ || ೨೮ ||

1 ರಸರಂ *ಕವಿಚರಿತ್ರೆ I–ಪು. ೪೪೬ "ತುರಗದ ಪೋಷಕ್ಕೆ" ಎಂಬ ಪಾಠ ಕೊಟ್ಟಿದೆ

ಕಂ|| ಎರಡುಂ ಕಣ್ಣಿಂ ಕೆಳಗಿ |
ವೆರಲೊಳ್ ಮುಂಗಾಲ ಕಲೆಗಳೆರಡಱ ಕೆಳಗಿ ||
ವೆರಲೊಳ್ ವಕ್ಷದೊಳಗಮೆರ |
ಡೆರಡುಂ ತೊಡೆಗಳೊಳಗೆ ಬಿಡುವುದು ಸೆರೆಯಂ || ೨೯ ||

ಸುಡುವೊಡಮೆತ್ತಾನುಂ ಸೆರೆ |
ವಿಡುವೊಡಮೇಗೆ(ಗಿ)ಟ್ಟುದೆಂದು ನೆಗಲ್ದುದಯುಕ್ತಂ ||
ಸುಡುವುದು ಪೊಟ್ಟರೆ ಸೆರೆಯಂ |
ಬಿಡುವುದು ಮೂಱನೆಯ ಜಾವದಿಂದಂ ಬೞಿಯಂ || ೩೦ ||

ನಿರುಹಣಮುಪ(ಮನು)ವಾಸ(ಹ)ನ ಮುಂ |
ಸೆರೆವಿಡುವುದುಮಗ್ನಿಕರ್ಮಮಾ ಸ್ವೇದಮನು ||
ತ್ತರವಸ್ತು(ಸ್ತ್ರಿ) ವಿಧಾನಮನಾ |
ವರಿಸಿದುದಿದು ಚಂದ್ರಮತದ ದಶಮಾಧ್ಯಾಯಂ || ೩೧ ||

ಇಂತು ದಶಮಾಧ್ಯಾಯಂ

# ಏಕಾದಶಾಧ್ಯಾಯಂ

## ಶೂಲೆರೋಗಂ

ಕಂ|| *ತತ್ಕಮಲ ಕಳಿ(ಣಿ)ಸ ಕಬಲ(ಳ)[1]ಸ |
ಮುತ್ಕ ಸುಖ(ಶುಕ)ಪ್ರತತಿ ಪಸಿಯನೇತ್ರದ ನವಚಂ[2] ||
ಚತ್ಕಂಚುಕಮನಿಳಾವಿಳ |
ಸತ್ಕಾಮಿನಿ ತೊಟ್ಟ ಪೋಲ್ಕೆಯಂ ಘಟಿಯಿಸುಗುಂ || ೧

ಉದರಾಗ್ನಿಯಱಿದು ಕುಡುವುದು |
ಕುದಿರೆಗೆ ಜೀವಣಿಗೆಯಂ ಹೃತಂ ಪಿರಿದಾದಂ ||
ದುದರಾಗ್ನಿ ಕೆಟ್ಟು ವಿಷ್ಟಂ |
ಭದೊಳಮರ್ಗುಮಲ್ತೆ ವಿಕೃತ ಪುರುಷಾವೇಶಂ || ೨ ||

(ಶೂಲೆರೋಗಂ)

ಪಸಿದಡಹಡಿಸುವ ಕುದಿರೆಗೆ[3] |
ಬಸಿರಡವಿನ ಪೊಲ್ಲಖಾ(ಬಾ)ಣವಂ ಕಟ್ಟಿದೊಡು ||
ಬ್ಬಸವಾಗಿ ಬೇನೆಯೊಳ್ ಸೈ
ರಿಸಲಾಱ(ಗ)ದೆ ಬೀೞ್ಗುಮದು ಸುಭಿಕ್ಷಂ ಪೆಸರಿಂ || ೩ ||

[4]ಪಡು(ಡ)ಗುಂ ಪೊರಳ್ಗುಂ (ಸಲೆ) ಸಿಡಿ |
ಮಿಡಿಯಕ್ಕುಂ ಬೆಮರ್ತುಮುಮ್ಮಳಿಸುಗುಮಾ ||
ಗಡೆ(ಳೆ) ತಲೆಯಂ ಕೆಳಗಿಡುಗುಮ |
ದಡಿಗಡಿಗೆ ಸುಭಿಕ್ಷಶೂಲೆ ಕೆರಳ್ದೊಡೆ ತುರಗಂ || ೪ ||

ಅರಿವುದು ನಾಗರದಿಂ ನಾ |
ಗ(ರ)ಮಂ ನಸ್ಯಾಂಜನಂಗಳಂ ಮಾ(ಡು)ಡಿ ಸವಿ ||
ಸ್ತರದಿಂದ ಮಲ್ಲದಾದೊಡೆ |
ನಿರೂಹಣಂ ಮಾಟ್ಕೆ ಸರ್ವಶೂಲಾಪಹರಂ || ೫ ||

ಸರುಷಪಮಂ ಸೈಂಧಮುಮ |
ನರಿದೆಳ್ಳೆಣ್ಣೆಯೊಳೆ ಕೂಡೆ ಪೊಕ್ಕುಳಕಲಿ(ಳೆ)ಯೊಳ್ ||
ಬೆರಸಿ ನಿರೂಹಣಗೆಯ್ವುದು |
ತುರಗಕ್ಕದು ಸರ್ವಶೂಲ ನಿರ್ಮೂಲಕರಂ || ೬ ||

1 ಸಮುಕತ್ಕ. 2 ಚಂದ್ರಕ್ತಭೂಕಮದು, ......ಪೋಸ್ಥಪೋಲ್ಕೆಯಂ ಘಟ್ಟಿಸುಗುಂ. 3 ರೆಗೆ ಬಸಿಱ ಅಡವಿ....... 4 ಸುಡುಗುಂ.

* ಈ ಪದ್ಯವು ಈ ಗ್ರಂಥಕ್ಕೆ ಸಂಬಂಧಪಟ್ಟುದಲ್ಲ, ಲೇಖಕನ ಪ್ರಮಾಣದಿಂದ ಇಲ್ಲಿ ಸೇರಿರಬಹುದು— ಎಲ್ಲಾ ಪ್ರತಿಗಳಲ್ಲೂ ಇದ್ದುದರಿಂದ ಇಲ್ಲಿ ಕೊಟ್ಟಿದೆ.

ಕಂ|| ಇ(ಹಿ)ಂಗು ಬಜೆ ಚಿತ್ರಮೂಲಂ |
ಶೃಂಗಿಯುಮಜದೋದೆ ಪಥ್ಯೆಕಣ ವೀರಂ ಕು
ಷ್ಠಂ ಗರ್ದುಗು ತಿಗಡೆಯಿಂತಿವ |
ನಿಂಗು ಮೊದಲ್ಮಾಡಿ ಕೊಳ್ಗೆ ಭಾಗೋತ್ತರಮಂ

ಒಂದೆರಡು ಮೂಱು ನಾಲ್ಕ |
ಯ್ದಂದಾಱೇೞೆಂಟು ನವದಶವು ಭಾಗವು ||
ನೊಂದಾ(ತಾ)ಗಿ ಕೂಡಿ ಬಸು(ಸಿ) ನೀ |
ರಿಂದಂ ಕುಡೆ(ಡಿ) ಸರ್ವಶೂಲ ನಿರ್ಮೂಲಕರಂ || ೮ ||

ಶೃಂಗಿಯ ಬೇರುಂ ವಾಣಿಜ |
ದಿಂಗುಂ ಬೆಳ್ಳುಳ್ಳಿ ತಿಗಡೆ ಸೈಂಧವವಿಷಾ ಪಂ ||
ಚಾಂಗವುಮಂ ಸಮಭಾಗಂ ತು |
ರಂಗಕ್ಕೆಱೆ[ಯಲದು]ಸರ್ವಶೂಲಾಪಹರಂ || ೯ ||

ಬಜೆಯಿಂಗು ಶುಂಠಿ ಕಿಱಿದೇ(ದೆಂ) |
ಗಜಮೋದಂ ತಿಗಡೆ ಸೈಂಧವಂ ದಂತಿಯನು ||
ಷ್ಣಜಲಮಿಶ್ರಿತದಿಂ ಮಾ |
ಡೆ ಜಯಂಗೆಯ್ಗುಂ ಸಮಸ್ತ ಶೂಲಾ(ಲ)ವ್ಯಥೆಯಂ || ೧೦ ||

ತ್ರಿಕಟುಕಮುಮಿಂಗುಮೋವುಂ ಚಿ |
ತ್ರಕಮುಂ ಕಿಱಿದೇ(ದೆಂ)ಗು ಗರ್ದುಗು ಬಿಡುಲವಣ ಜೀ ||
ರಕ ಚವ್ಯ ಲವಣ ಸಂವ |
ರ್ಚಕಮುಮ್ಮೃತಂ ಶ್ಲೇಷ್ಮವಾತಶೂಲಾಪಹರಂ || ೧೧ ||

ಬಜೆಯಿಂಗು ತಿಗುಡೆ ಕಟುಕ |
ವ್ರಜಮತಿಬಜೆ ಪಂಚಲವಣಮಣಿಲೆಯಕಾಯ್ ಮ ||
ತ್ತಜಮೋದಮುದರಶೂಲಾ |
[1]ರುಜೆಯುಂ ಕಿಡಿಸಲ್ಕೆ ನೆಱೆಗುಮುಷ್ಣೋದಕದೊಳ್ || ೧೨ ||

ಇಂಗು ಬಜೆ ಪಂಚಲವಣಂ |
ಶೃಂಗಿಯ ಬೇರುಂ ವ್ರಜಾತಿವಜೆ ಪಿಪ್ಪಲಿ ಪ ||
ಥ್ಯಂ ಗರ್ದುಗು ಮೆಣಸು ಮದ್ಯಂ |
ಪಿಂಗಿಸುಗುಂ ಶೂಲೆವೇನೆಯಂ ತತ್ಕ್ಷಣದೊಳ್ || ೧೩ ||

ದುಷ್ಟಾಂಬುಪಾನದಿಂದತಿ |
ಕಷ್ಟಂ (ಬಾ)ಖಾಣದಿನನಿಷ್ಟಮಾತಪದಿಂದಂ ||
ವಿಷ್ಟಂಭಿಸಿರ್ದ ಮಲದಿಂ |
ಕೋಷ್ಠಾಭ್ಯಂತರದೊಳುಗ್ರವೇದನೆಯುಕ್ಕುಂ || ೧೪ ||

1 ವ್ರಜಮುಂ.

ಕಂ|| ತೊಡೆಯುಂ ಮೊಗವುಂ ಕಾಲುಂ |
ಬಿಡದಾಡುವುದರ್ಕಬಿಂಬದತ್ತಲೆ ನೋೞ್ಕುಂ ||
ನಿಡುಸುಯ್ಗುಂ ಧಾತುಗಳುಂ |
ಕಿಡುಗುವುತಿಪ್ರಬಲವಾಗೆ ರೂಕ್ಷಾವರ್ತಂ || ೧೫ ||

ಮೇಗುಸಿರಿಡುಗುಂ ತಲೆಯುಂ |
ಬಾಗುಗುಮಂಘ್ರಿಗಳ ನಡುಗಳುಂ ಕಂಪಿಸುಗುಂ ||
ಮೂಗಿಣೆ(ಱ)ಗುಂ ವೇದನೆಯಿಂ |
ಬೇಗಂ ಬೀೞ್ಗುಸಮಶೂಲೆ ರೂಕ್ಷಾವರ್ತಂ || ೧೬ ||

ತಿಲತೈಲಂ ದುಗ್ಧಂ ಪಿ |
ಪ್ಪಲಿ ಮೇಣ್ ಮೊಸರೆಣ್ಣೆ ತುಪ್ಪಮಿವನೂಡುಗೆ ಮೇ ||
ಣಲಸದೆ ನಾಗರವುಂ ಕ |
ಣ್ಣೊಳೆಚ್ಚಿ ಮೂಗಿನೊಳಮೆಱೆಯೆ ಶೂಲಾಪಹರಂ || ೧೭ ||

ನವಘೃತದೊಳ್ ಕೊಡಸಿಗೆ ಸ್ಯೆಂ |
ಧವ ರೇಣುಕ ಚಿತ್ರಮೂಲ ವಾಣಿಜಮಿಂಗೆಂ ||
ಬಿವನಿಕ್ಕಿ ಪಿಂಡಮಂ ಮಾ |
ಡುವುದು ನಿರೂಹಣಮನಂತು ಶೂಲಾಪಹರಂ || ೧೮ ||

ತುರಗಕ್ಕೆ ಶೂಲೆಗಂ ಕ್ರಿಮಿ |
ಹರಣಕ್ಕಂ ತಕ್ಕ ಪಿಂಡಮಂ ಮುನ್ನಮೆ ಸಂ ||
(ಹ)ವರಿಸಿ(ಸ)ದೊ[1]ಡಂ ಜ(ಮೆ)ಮಾಮನೆ |
ಯುಱಿವಾಗದೊಳ್ ಬಾವಿದೋಡಿ ನಂದಿಪರೊಳರೇ || ೧೯ ||

ಕಡುವಿಸಿಲುರ್ಚಿದೊಡಂ ನೀ |
ರಡಿಸಿದೊಡಂ ಮೂತ್ರಕೃಚ್ಛ್ರಯುಕ್ಕುಂ ಶ್ರಮದೊಳ್ ||
ಪ(ಬ)ಡವಾಗಿ ಪಡುಗುಮೇೞ್ಗುಂ |
ಕಡಂಗಿ ಬೆಮರುಣ್ಮೆ ಬಲಿಗು ವಾಜಿಗೆ ಮೇಢ್ರಂ || ೨೦ ||

ಮಾಗಧ ಮರಿಚಂ ಸ್ಯೆಂಧವ |
ನಾಗರ ಕಾಳಿಂಗಮಿಂಗು ಸರುಷಪದೊಳ್ ಸಂ ||
ಯೋಗಂಗೆಯ್ಯುರ್ಬುದಮುಮ |
ನಾಗಳೆ ಸಲಿಸುವುದು ಗುದದೊಳಂ ಮೇಢ್ರದೊಳಂ || ೨೧ ||

ನಾಗರಮನರೆದು ಕರಮಿಂ |
ಬಾಗಿರೆ ಗಾಳಿಸಿ ಬೞಿಕ್ಕೆ ನಸ್ಯಾಂಜನಮಂ ||
ಬೇಗಂ ಮಾೞ್ಪುದು ನೀರೊಳ |
ಗಾಗಳೆ ಪಿಡಿಯಿಸುಗೆ ಮೂತ್ರಕೃಚ್ಛ್ರಾಪಹರಂ || ೨೨ ||

---

1 ತಿಂಬಮುಮನೆ, ಕ್ಬುಮೆ.

(ಶೋಣಿತಮೋಹನ ರೋಗ)

ಕಂ|| ಇನಿತಿನಿತು ರಕ್ತಮಂ ನೀ |
ರೆನಿತನಿತುಂ ಮೂತ್ರಿಸುತ್ತುಮಿರೆ ಶೋಣಿತಮೋ ||
ಹನವೆಬ್ಬುಂದು ತುರಗ |
ಕ್ಕನಿವಾರಿತಮಾಗಿ ಮಾಟ್ಕೆ ಶೀತಕ್ರಿಯೆಯಂ || ೨೩ ||

ಚಂ|| ಎ(ಯ)ಲವ[ದ]ಗೊಟ್ಟಿ ಯಷ್ಟಿಮಧುಕಂ ಮಧು ಮಂಜಿಟೆ ತುಪ್ಪಮಿಂತಿವಂ |
ಕಲಸಿ ಹಯಕ್ಕೆ ಕೊಟ್ಟು ಬಟುಕೇಲೆ ಘೃತಂ ನವದುಗ್ಧವಂ ಸಮಂ ||
ತಲಸದೆ ಕೂಡಿ ಮಾಡುಗನುವಾಸನವಂ ವಿಪರೀತವೃತ್ತಿಯಿಂ |
ನೆಲಸಿದ ರಕ್ತಮೋಹನ[1]ಹರಂ ತುರಗಕ್ಕೆ ಕರಂ ಮನೋಹರಂ || ೨೪ ||

ಕಂ|| [2]ಉಪ್ಪುಂ ಕರ್ಪಿನ ರಸಮುಂ |
ಪಿಪ್ಪಲಿಯುಂ ಘೃತಮುಮೆಳ್ಳುಮಿನಿತಂ ಮನಹರಂ ||
ತಪ್ಪಿನವಮಾಡುಗೆ ಪಾಲೊಳ್ |
ತಪ್ಪಿಲ್ಲದೆ ಹಯಕ್ಕೆ ರಕ್ತಮೋಹಂ ಕಿಡುಗುಂ || ೨೫ ||

ನಿರೊಳಗರೆವುದು ಸೌತೆಯ |
ಬೇರಂ ಬೀಜಮುಮನಲ್ಲಿ ಬೆಲ್ಲಮನಿನಿತಂ ||
ಚಾರಿಸಿ ಕುಡುವುದು ಬಟುಕಂ |
ನೀರೊಳ್ ಪ(ಪಿ)ಡಿಸುಗೆ (ಸು)ರಕ್ತಮೋಹಂ ಕಿಡುಗುಂ || ೨೬ ||

(ಮಲಬಂಧನ ರೋಗ)

ತುರಗಕ್ಕೆ ಲದ್ದಿ ಪೋಱಮಡ |
ದಿರೆ ಪುಣಿಸೆಯ ಪಣ್ಣಬತ್ತಿಯೊಳ್ ಸೈಂಧವಮಂ ||
ಬೆರಸಿ ಗುದಮುಖದೊಳಿಡೆ ಬಾ |
ಹಿರಮಕ್ಕುಂ ಕಠಿನಮಾಗಿ ಬಿಗಿದಿರ್ದ ಮಲಂ || ೨೭ ||

(ಕೀಟಗಳಂ ಮೆದ್ದ ರೋಗ)

ಬೀಸದು ವಾಲಧಿಯಂ ನಿ |
ಶ್ಶ್ವಾಸಂ ಪಿರಿದಕ್ಕುಮುಣ್ಣ್ಣಗುಂ ಲೋಳೆ ಬೆಮರ್ ||
ಸೂಸುಗ. ಮಾಕಂಪಿಸುಗುಂ |
ಧೂಸರಕೀಟಕಮನಡಸಿ ಮೆದ್ದ ತುರಂಗಂ || ೨೮ ||

ತುರಗದ ತನುವಂ ಸಗಣದೊ |
ಳೊರಸಿ ಬಟುಕ್ಕೆಣ್ಣೆ *ಪಂಚಕೋಲಕಷಾಯಂ ||
ಸರುಷ(ಪ)ಂ ಸಮ್ಮಿಶ್ರಿತದಿಂ |
ನಿರೂಹಣಂ ಮಾಟ್ಕೆ ಕೀಟದೋಷಾಪಹರಂ || ೨೯ ||

ಪಿಪ್ಪಲಿಮೂಲಂ ಚವ್ಯಂ |
ಪಿಪ್ಪಲಿ ದಹನಂ ಮಹೌಷಧಂ ಸಮಭಾಗಂ ||
ತಪ್ಪದೆ ಕೂಡಿದೊಡಯ್ದು ವಿ |
ವಪ್ಪುವು ಮುಂ ಪೇಟ್ದ ಪಂಚಕೋಲದ ಪೆಸರ್ಗಳ್ || ೩೦ ||

---

1 ನನರಂ 2 ತುಪ್ಪಂ *ಪಂಚಕೋಲವಾವುವುವೆಂಬುದರ ವಿವರಣೆ ಈ ಮುಂದಣ ೩೦ನೆಯ ಪದ್ಯದಲ್ಲಿಹೇಳಿದೆ

ಕಂ|| ಬಾಲಂ ಬೀಸದು ಸಂತಾ |
ಪಾಲಸನಾಗಿರ್ಕುಮಿಕ್ಕುಗುಂ ಮೆಯ್ಯುಂ ಕ ||
ಣ್ಣಾಲಿಗಳಂ ಬಿಟ್ಟಿರ್ಕ್ಕುಂ |
ಜಾಲಿಗಕೀಟಕಮನಡಸಿ ಮೆಲ್ದ ತುರಂಗಂ || ೩೧ ||

ನಿರುಪಮಮನುವಾಸನಮಂ |
ತುರಗಕ್ಕೆ ವಿಳಂಗ ಪಿಪ್ಪಲಿ ಚಿತ್ರಕಂ ನಾ ||
ಗರದಿಂ ಮಾಳ್ಪುದು ಪುಟುವಂ |
ತುರಂಗವಂ ತಿಂದ ದೋಷಮಿರದುಪಶಮಿಕುಂ || ೩೨ ||

(ಕೋಗಿಲೆ ಪುಟು ತಿಂದ ರೋಗ)
ಮೇಗುಸಿರಿಡುಗುಂ ತಲೆಯಂ |
ಬಾಗಿರ್ಕುಂ ಮೇಯದಿರ್ಕುಮಪ್ಪೊಡೆ ತುರಗಂ ||
ಕೋಗಿಲೆಯಂ ತಿಂದುದದ |
ರ್ಕಾಗಳೆ ಮಾಡುವುದು ನಸ್ಯಪಾನಾಂಜನಮಂ || ೩೩ ||

ಕಟುಯಂ ಬಾಟುಕಮುಮನು |
ಜ್ಜ್ವಳಲವಣಸಮೇತಮಿಕ್ಕು ಸುಂಠಿಯನರೆದಾ ||
ಗಳೆ ನಸ್ಯಾಂಜನವಿಧಿಯಿಂ |
ದಲೆಗುಂ ಕೋಗಿಲೆಯನಡಸಿ ಮೆಲ್ದಾ ವಿಷಮುಂ || ೩೪ ||

(ಭೇದಿ ರೋಗ)
ಶರಪುಂಖಿಯನಂಬಿಲದಿಂ |
ನಿರೂಹೆಮಂ ಮಾಳ್ಕೆ ಮೊಕ್ಕಳಂ ಕದಡಿ ಬಸಿರ್ ||
ಪರಿವೊಡೆ ಮೊಸರಂ ಕುಡುವುದು |
ಪರಿಭವಿಸಿರ್ಕಟ್ಟಿ ಗಟ್ಟಿದಂತಿರೆ ನಿಲ್ಗುಂ || ೩೫ ||

(ಕ್ರಿಮಿದೋಷ)
ಅನಿಲಕಫಪಿತ್ತದಿಂದಂ |
ಜನಿಯಿಸುಗುಂ ರಕ್ತದೋಷಮುದಟೊಳ್ ಕ್ರಿಮಿಗಳ್ ||
ಜನಿಯಿಸಿ ಪುರೀಷದೊಳ್ ತೊ |
ಟ್ಟನೆ ಪೋಪಮಡೆ ಕುಡುಗೆ ನಿಂಬವಮಂ ಮಧುಸಹಿತಂ || ೩೬ ||

ಮೆ(ಳ)ಣಸು ಮಧು[1] ದಾರು ಕೊಡಸಿಗೆ |
ತಿಲಮಿನಿತುಮನರೆದು ಕುಡುಗೆ ಕಣ್ಣೊಳ್ ಮೇಣ್ |
ಗಲಿಯಿಸಿದೊಡೆ ಪಸುಮೂತ್ರಂ |
ಗಳನೂಡುಗೆ ಕಿಡಿಸುಗದುವೆ ತಕ್ಕ್ರಿಮಿಕುಲಮಂ || ೩೭ ||

ಬಡಿಗುಂ ಕಾಲಂ ಮೆಲ್ಲನೆ |
ಪಡುಗುಂ ಸುಕ್ಕಿರ್ಕುವಡರೆ [2]ಸುಯ್ಯುಗುಂ ಕಣ್ಣಂ ||
ಬು(ಬಿ)ಡುಗು ಮತಿವಿಕಲನಕ್ಕುಂ |
ಕಡಂಗಿ ತಿನೆ ವಜ್ರಕೀಟಕಂ ಬಸಿಱೊಳಗಂ || ೩೮ ||

1 ದ್ರಾಕ್ಷಿ 2 ಸಾಯ್ಗುಂ, ಸಾಯ್ದು.

ಕಂ|| ಕುಱಿಯುಣ್ಣೆ ಯನುಗ್ರಾಗ್ನಿಯೊ |
ಳುಱೆ ಸುಟ್ಟಾ ಬೂದಿಯೊಳಗೆ ನವಘೃತಮಂ ತಂ ||
ದೆಱೆದಿಕ್ಕೆ ಹಯಕೆ ಮೂಱುಂ |
ತೆಱದ ಮಹಾವಜ್ರ ಕೀಟಕಂಗಳ್ ಕಿಡುಗುಂ || ೩೯

ಪಾಲಂ ಬೆಲ್ಲವುಮಂ ಸ |
ಲ್ಲೀಲೆಯಿ ಕುಡೆ ಬೆ(ಬಿ)ಲ್ಲವಿಲ್ಲದಂದಿಪ್ಪೆ(ಪ್ಪಿ)ಯ ಪೂ ||
ಪಾಲೆಂಬಿವನೆಱೆವುದು ನಿ |
ರ್ಮೂಲಂ ಮಾಡುವುವು ವಜ್ರಕೀಟಕತತಿಯಂ || ೪೦

ಶರಪುಂಖಿ ವಜ್ರಕೀಟಕ |
ಹರಣಂ ವನದ್ರಾಕ್ಷೆ ವಜ್ರಕೀಟಾಪಹರಂ ||

…………ನಿರುತಂ ತುರಂಗಮಕ್ರಿಮಿಹರಣಂ || ೪೧ ||

ಒಮರ್ಾನಂ ಬ್ರಾಹ್ಮಿಯ ರಸ |
ಮೊಮರ್ಾನಂ ಕೈಪೆಸೊರೆಯ ರಸ ಮವಱೊಳ್ ಮ ||
ತ್ತೊಮರ್ಾನ[1]ಮೆಣ್ಣೆ ವೆರಸಿದ |
(ನಿ)ಗಿರ್ಮಿಸುವುದು ಪಾನವಿಧಿಯೊಳಾಕ್ರಿಮಿಕುಳಮಂ || ೪೨ ||

(ಕೀಟಾದಿಕ್ರಿಮಿ ಭಕ್ಷಣ ಹರ)

ಮಗಮಗಿಪ ತುಪ್ಪದೊಳ್ ಕಳ(ಬ) |
ವಿಗೆಯಂ ಪುಡಿಮಾಡಿಕೊಂಡು ಬೞಿಕೊಯ್ಯನೆ ತಾ ||
ಳುಗೆಯಂ ಪರಿಹರಿಪುದು(ಸುಗು) ವಾ |
ಜಿಗೆ ಹಿತಮಿದು ಕೀಟಕಾದಿ ಕ್ರಿಮಿಸಂಹರಣಂ || ೪೩ ||

ನಗರೆಯೆಲೆ ಕನಕಪತ್ರಮು |
ಮೊಗನಿಯ ತಿಗುಡಿಂತಿವೆಲ್ಲಮಂ ಕೊಟ್ಟದೊಳಿ ||
ಕ್ಕುಗೆ ವಾಜಿಗೆ ತದ್ರಸಮಂ |
ಮೊಗಸಲೊಡಂ ಪುೞು ಮರಲ್ದುವುಂ ಬೞಿಯಕ್ಕುಂ || ೪೪ ||

ತಿಗುಡೆ [2]ಕಟುತ್ರಯುಮಂ ಕೊಡ |
ಸಿಗೆ ಖದಿರಂ ತ್ರಿಪಳೆ ಬಜೆ ವಿಳಂಗಂ ನಿಂಬಾ ||
ಸ್ಥಿಗಳಂ ಗೋಮೂತ್ರದೊಳೂ |
ಡುಗೆ ಹಯಮಂ ಕೀಟಕಾದಿ ಕ್ರಿಮಿಸಂಹರಣಂ || ೪೫ ||

ನೊರೆವಾಲೊಳ್ ವಾರಿಜಮಂ |
ಬೆರಸಿಕ್ಕುಗೆಯಿಂಗುಳಿವದಿಲ್ಲದಿದರ್ೊಡೆ ಪಾಲೊಳ್ ||
ಬೆರಸಿರ್ಕುಗೆ ಶರ್ಕರೆಯಂ |
ಪರಿಗುಂ ಸ್ವಸ್ಥಾನಕಕ್ಕೆ ಕೀಟಕನಿಕರಂ || ೪೬ ||

1 ಬೆಣ್ಣೆ. 2 ಕಟುಕತ್ರ. 3 ಮೊಡೆಯುದಿ

ಕಂ|| ನಟ್ಟಿರೆ ಕಿವಿಯುಂ ಕಣ್ಗಳ್ |
ಬಿಟ್ಟಿರೆ ಮೆಯ್ಯಱಿಯದೆಱಗಿ ತಡವಂದು ತಡಂ ||
ಮೆಟ್ಟಿ ತಿದಿಯಂತೆ ಬಾತಿರೆ |
ಪೊಟ್ಟೆ ಕರಂ ವಿಕಲನಾದ ತುರಗಂ ಸಾಯ್ಗುಂ || ೪೭ ||

(ಸಿಂಘಾ(ಹಾ)ಣ ರೋಗಂ)

ಬೂ(ಪೂ)ರಣ ಕ(ಗ)ಡಲೆಗಳಿಂ ಕೊಳೆ |
ನೀರಿಂ ದುರ್ಗಂಧರಸಕುಭೋಜನದಿಂದಂ ||
ಮಾರುತ ಪಿತ್ತ ಶ್ಲೇಷ್ಮ ವಿ |
ಕಾರಂಗಳ್ ನೆಗಟೆ ಪುಟ್ಟುಗುಂ ಸಿಂಘಾ(ಹಾ)ಣಂ || ೪೮ ||

ತುರಗದ ನಯನಂಗಳ್ ನೀರ್ |
ಸುರಿಗುಂ ನಾಸಾಂತರಂಗದಿಂದಂ ಶ್ಲೇಷ್ಮಂ ||
ಸುರಿಗುಮಡಿಗಡಿಗೆ ಕೆಮ್ಮು |
ತ್ತಿರೆ ಸಿಂಘಾ(ಹಾ)ಣದ ವಿಕಾರಮೆಂದಱಿವುದದಂ || ೪೯ ||

ರಜನಿ ಬರಿವದಣೆ ಕಟುಕ |
ವ್ರಜಮಿನಿತುಮನರೆವುದಾಡ ಪಾಲೊಳ್ ತುರಗ ||
ವ್ರಜಕೆ ಕುಡೆ ನಸ್ಯಮಂ ವಾ |
ತಜ ಪಿತ್ತಜಕಫಜಮೆನಿಸ ಸಿಂ(ಘಾ)ಹಾಣಹರಂ || ೫೦ ||

ಅರದಗಸೆಯೆಲೆಗಳಂ ವಿ |
ಸ್ತರದಿಂ ಗಾಳಿಸಿ ಕಟುತ್ರಿಕಂ ತ್ರಿಫಲೆಗಳಂ ||
ಬೆರಸಿ ತನಿರಸದೊಳಿಂಬಾ |
ಗಿರೆ ನಸ್ಯಂ ಗೆಯ್ದೊಡದುವೆ ಸಿಂಘಾ(ಹಾ)ಣಹರಂ || ೫೧ ||

(ಖಾಸರೋಗಂ)

ಆಲತ್ತಿಯುರಳ ಬಸುರಿಯ |
ಪಾಲೇಱಿದ ಕೊಂಬನುಡಿದು ಮಧುಮಿಶ್ರಿತದಿಂ|
ದಾಳೋಚಿಸದಿಕ್ಕುವುದಾ(ದೀ) |
ರೇಟು ದಿನಂಬರ ಹಯಕೆ, ಖಾಸವಿನಾಶಂ || ೫೨ ||

ಅರೆವುದು ಸೈಂಧವ ಮಂ ನಾ |
[ಗರಮು] ಮನೊಡಗೂಡಿ ಬಟಿಕೆ ಗುಳ್ಳದ ರಸಮಂ ||
ಬೆರಸುವುದು ಮೂತ್ರಸಹಿತಂ |
ತುರಗಕ್ಕಂ ನಸ್ಯಮಲ್ತೆ ಸಿಂಘಾ(ಹಾ)ಣಹರಂ || ೫೩ ||

ರಸನಂ ಕುಡಲಾಗದು ರ |
ಕ್ಷಿಸುವುದು ನಸ್ಯಾದಿದಹನದೊಳ್ ತುರಗವು[1]ವಂ ||
ಮಿಃಸಿಸುವುದಿರುಳ್ ಮೊಗಂ ಸೇ |
ಕಿಸುವುದು ಸೆರೆವಿಡುವುದ(ಸ್ರು)ಶ್ರುಪಾತಾಂತರದೊಳ್ || ೫೪ ||

1 ಮನೀಸುವುದಿರುಳೊಳ್ ಮೊಗಮಂಸೇ

(ರಕ್ತಸಿಂಘಾಣ ರೋಗಂ)

ಕಂ|| ಕುರು ಮೂಡಿದಂತೆ ಗಂಟುಗ |
ಳಿರೆ ನಾಸಿಕದೊಳಗೆ ರಕ್ತಸಿಂಹಾಣ(ಮು)ಂ ನೀ ||
ರ್ಕರಿಯಲ್ಪಡೆಯದೆ [1]ಕೀತೊಡೆ |
ತುರಗಕ್ಕದು ಮರಣಚಿಹ್ನಮಭಿನವಚಂದ್ರಾ || ೫೫ ||

ಆವಿನ ಪಾಲ್ ದಾಳಿಂಬದ |
ಪೂವಿನ ರಸದೊಳಗೆ ನಸ್ಯಮಂ ಮಾಳ್ಪುದು ವಿ |
ದ್ಯಾವಿದರಶ್ವಕ್ಕೆ ಮುಖ |
ಸ್ರಾ(ಶ್ರಾ)ವಣೆಯಿಂ ಸುರಿವ ರುಧಿರಮಂ ಸ್ತಂಭಿಸುಗುಂ || ೫೬ ||

ಕಱುಕೆಯ ರಸಮಂ ಪಾಲುಮ |
ನೆಱೆವುದು ತುರಗಕ್ಕೆ ನಸ್ಯಮಂ ತಲೆಯೊಳ್ ತಂ |
ದೆಱೆವುದ(ಪ)ಪಾಮಾರ್ಗರಸಮಂ |
ಪಱಿಪಡುಗುಂ ಮೂಗಿನಿಂದಮುಣ್ಮುವ ರುಧಿರಂ || ೫೭ ||

(ಬಾವು [ಮುಷ್ಕವಾತ] ರೋಗಂ)

ವಾತಾದಿಯಾಗೆ ಕ್ರೊ(ಕೊ)ೀಶ |
ವ್ರಾತಂ ವಿಕೃತ ಪ್ರಭಾವದಿಂದಂ ತಲೆ [2]ಮುಷ್ಕಂ ||
ಬಾತೊಡೆ ತೊಡರ್ಚಿ ಕಟ್ಟುವು |
ದಾತಪದೊಳ್ ಹಯಮನೆಂದನಭಿನವಚಂದ್ರಂ || ೫೮ ||

ಬಜೆಯುಂ ಕಣಗಿಲ್ ವಿಳಂಗಂ |
ರಜನೀ[3]ದ್ವಿತಯಂ ಕಟುತ್ರಯಂ ಕುಟಜಫಲಂ ||
ರುಜೆ ಸಾಸಿವೆ ಸೌ(ಸಂ)ವರ್ಚಲ |
ಮುಜಮೋದಂ ಮುಷ್ಕವಾತಹರಣಂ ಪಿಂಡಂ || ೫೯ ||

ಬಱಿವದಣೆ ಸುಣ್ಣ[4]ಗಂದಿಗೆ
ನಱುವಲ್ ಗುಳ್ಳಂ ಮಣಿಸಿಲೆ ಸೀವನ್ನಿ ಶತಾ ||
ವರಿ ಪುಲಿಗಿಲ್ [5]ಬೆಲ್ಲವತ್ತಂ |
ಗರುಗಂ ಗೋರಟೆ ತವಸಿ ಆವುಂಡಲಿಗೆಯುಮಂ || ೬೦ ||

ಇನಿತಱ ಬೇರಂ ನಾಗುಳ |
ಮೆನೆ ನೀರುಮ ನೆಟೆದುಕೊಂಡು ಮತ್ತೊಕ್ಕುಳಮ ||
ಪ್ಪನಿತಾಗೆ [6]ತೆಗಪಿ ಯೊಕ್ಕಳ |
ಮೆನಲೆಣ್ಣೆಯ ನಾಕಷಾಯ[7]ದೊಳ್ ಕೂಡಿದುದಂ || ೬೧ ||

1 ಕಿತ್ತೊಡೆ 2 ಮುಖಂ 3 ದ್ವಿತಯಂ ಕುಟಜ 4 ಸುಣ್ಣಗಂದಿಗೆ ಪಾದರಿನಱು, ಸುಣ್ಣಪಾದರಿನಱು 5 ಬೆಲ್ಲವತಂ ಎಂದಿರಬಹುದು 6 ನೆರಪಿ 7 ದೊಳ್‌ಕುಡಿದುದನು, ದಳದೊಳ್ ಕೂಡಿತುದುಂ

ಕಂ|| ಎಣ್ಣೆ ನಿಲೆ ಯಟ್ಟು ಕೊಂಡಾ |
ಯೆಂಣೆಯುಮುಂ ಘೃತಮುಮಂ ಗುದಸ್ಥಾನದೊಳಂ ||
ಪಣ್ಣನೆ ಗೆ(ಪೊ)ಯ್ದ ನುವಾಸಿಸಿ |
ದೆಣ್ಣೆ ಮಹಾದಿವ್ಯಮಲ್ತೆ ವಾತಾಪಹರಂ || ೬೨ ||

ತ್ರಿಫಲೆ ಬಜೆ ಬೆಲ್ಲ ಸುಣ್ಣಂ |
ಸುಪಥದ ಸದಗುಪ್ಪೆ ಮಾಸಿ(ಶಿ)ವಾಳಜಿ ಪುಡಿಯಂ ||
ವಿಪುಲವಂತಿ ತೈಲದಿಂದ |
ಟ್ಟುಪಯೋಗಿಪುದಲ್ತೆ ವಾಜಗನುವಾಸನಮಂ || ೬೩ ||

ತೊಡೆ ಜಂಘೆ ವಿಷಾಣಂ[1]ಕಿ |
ಬಿಸ್ತೊಡೆ ಕೋಶಂ ನಾಭಿ ಜಠರ[2]ಮಿಂತಿ[ನಿ]ತುಂ ಬಾ ||
ತೊಡೆ ತೊಡೆಯೊಳ್ ಪಾಂಡುವಿನೊಳ್ |
ಬಿಡುವುದು ಸೆರೆಯಂ ಬಱಿಕ್ಕೆ ಬಳಿವುದು ಕೆಸಱಂ || ೬೪ ||

ಅಂಗಡಿಯ ಮದ್ದುರ್ಗ ಪಲವು ಪ |
ದ(ಥ)ಂಗೊಳ್ಳವು ಬಗೆ(ಗ)ದ ಭೇದದೊಳ್ ಗಣಿ[ಯಿ]ಸ(ದೇ)ನಾ ||
ಸಂಗಡಿಸುವು(ವ)ರೆ(ದೆ)ಂಬಾಲ |
ಸ್ಯಂಗಪ್ಪುದನೋ[ದು]ಮದ್ದರ್ಗನಾಂ ಪೇೞ್ದಿಪ್ಪೆಂ || ೬೫ ||

ತುಱುವುದು ತಗ್ಗಿರ್ಗಯ ತೊವಲಂ |
ಕೊಳುವುದು ತನಿರಸಮನದನೆ ಮುಷ್ಕಾಂತರದೊಳ್ ||
ಬಳಿವುದು ವಿಷಾಣ ಮಱಗುಂ |
ಕಱಿಯಂ ತಗ್ಗಿರ್ಗಯನೆ ಪಿಂಡಮಿಕ್ಕುಗೆ ಬಱಿಯಂ || ೬೬ ||

ಒಂದೇಱುಗು ಮಿಱಗುಂ ಮು |
[3]ಷ್ಕಂ ದೋಷಂ ತೋರ್ಪದೆಸೆಯ ನಾಲ್ಕುಂದುವೊಡಾ ||
ದಂದಱಗೆ ಮುಷ್ಕಪಾಲನ |
ಮೆಂದದನಱದು ಮುಷ್ಕಸೂ(ಶೂ)ಲೆ ವಾತದಿನಕ್ಕುಂ || ೬೭ ||

ಎರಡುಂ ಬೀಜಮನೊಂದಾ |
ಗಿರೆ ಮೊದಲಂ ಕಟ್ಟಿ ಸೀ(ಸೆ)ರೆಯೊಳ್ ಸೇಕಮನಾ ||
ದರದಿಂ ಮಾಱ್ಪುದು ಪಾಲೊಳ್ |
ಬರಿಗದನಾ(ಂ)ತ್ರಿಕ[ದ] ಮುಂದನಂತದು ತೀರ್ಗುಂ || ೬೮ ||

ವಾತಹರಮಪ್ಪ ಪಿಂಡಮ |
ನಾತುರಗಕ್ಕಿ(ಕ್ಕೆ)ಕ್ಕಿ ಗರ್ದಗುಮುಪ್ಪಮನದನಂ ||
ತೀ ತೆರದೊಳಮುಪಶಮಿಸುಗು |
ಮಾತಪದೊಳ್ ಕಟ್ಟೆ ಪೂಸೆ ತರ್ಗಿಯ ರಸಮಂ || ೬೯ ||

1 ಕಿಲಿ ದಿ 2 ನಿಂತಿತುಂಬಾ 3 ಖಂ

ಕಂ|| ಕಾಸಿದ ಚಿಕ್ಕಣಿ ಕೆಸಱೊಳ್ |
ಸಾಸಿವೆ ಕಲ್ಲುಪ್ಪು ಕಣಿಕ ಮುದ್ದಿರ್ನ ಪುಡಿಯಂ ||
ಬೇಸಱದೆ ಬಾಹಿನೆಡೆಯೊಳ್ |
ಪೂಸುವುದುನ್ಮತ್ತರಸಮನೆಱೆದಂತದಱೊಳ್ || ೨೦ ||

ಸೂಲೆ ಸುಭಿಕ್ಷಾ(ಕ್ಷಂ) ರೂಕ್ಷಾ |
ಸೂಲೆಯೆ ಸಲೆ ಮೂತ್ರಸಿಕ್ಕು ರಕ್ತವಿಮೋಹಂ ||
ಶೂ(ಸೂ)ಲಾವಿಷ್ಕಂಭಕೀಟಕ |
ಸೂಲಾಕ್ರಮಿ [1]ಸಿಂಘ(ಹ)ಣದ್ವಯಂ ವಾತಾಂತ್ಯಂ || ೨೧ ||

ಇಂತೀ ವ್ಯಾಧಿಗಳ ವಿಕಾ |
ರಾಂತರಮಂ ವೈದ್ಯಭೇದಮಂ ಭಾವಿಸಿ ಕ ||
ಲ್ತಂತಾಗೆ(ಗಿ) ಪೇೞ್ದ ಚಂದ್ರಮ |
ತಾಂತರಮೇಕಾದಶಾಧಿಕಾರಂ ಸಾರಂ || ೨೨ ||

ಇಂತು ಏಕಾದಶಾಧ್ಯಾಯಂ

1 ‘ಸಿಂಘಾಣ’ ಶಬ್ದವನ್ನು ಛಂದಸ್ಸಿಗಾಗಿ ‘ಸಿಂಘಣ’ ಎಂದು ಪ್ರಯೋಗಿಸಿರುವಂತೆ ತೋರುವುದು ಮತ್ತು ಮೂರನೆಯ ಪಾದದಲ್ಲಿ ಒಂದು ಮಾತ್ರೆ ಹೆಚ್ಚಿದೆ, ವಿಷ್ಕಂಭ, ಕೀಟಕ – ಇವೆರಡು ಪದಗಳಲ್ಲಿ ಯಾವುದೊಂದನ್ನೂ ಮಾರ್ಪಡಿಸುವಂತಿಲ್ಲ.

# ದ್ವಾದಶಾಧ್ಯಾಯಂ

## ವ್ರ ಣ ಚಿ ಕಿ ತ್ಸೆ

ಕಂ|| ಕೆಱಕುತುಱಿಗ(ಖ)ಜ್ಜಿ ಕಂಚುಕಿ |
ಕುರುವಂಬುಳು ಪುತ್ತು ಬಾಹುಗಳ್ ಬಿಡದೆ ಭಗಂ ||
ಧರಮುರಿಸೆ ಕುಷ್ಠತದ್ಗುಂ |
ನರವುಲಿ ದುಷ್ಟವ್ರಣಂಗಳಿಂದಱಿವುದಿವಂ || ೧ ||

ತಳದೊಳ್ ಕುಷ್ಠಿಕೆಯೊಳ್ ಬಾ |
ಯೊಳವುಕ್ಷಿಯೊಳಸ್ರ(ಶ್ರ)ಪಾತದೊಳ್ ಪೇರುರದೊಳ್ ||
ಗಳದೊಳ್ ಪಾಂಡುವಿನೊಳ್ ವು |
ಣ್ಗಳಾದೊಡಿವು ದೋಷಜಂಗಳಭಿನವಚಂದ್ರಾ || ೨ ||

ಮಹಿಷಿಯ ಕೋಡೇಱುಗಳಿಂ |
ಬಹುವಿಧ ಶಸ್ತ್ರಾಭಿಘಾತದಿಂದಾರ್ಚಿ[ದ]ಭೂ ||
ರುಹದಿಂದ ಮಾದ ವಿವಿಧಾ(ದೋ) |
ಪಹತಂ ಸದುವಕ್ಷತಂಗಳಿಂದಱಿವುದವಂ || ೩ ||

ತಿಲಕದ ತೊಕ್ಕಪಮಾರ್ಗಂ |
ಗಳ ದಕ್ಕಂ ಸುಟ್ಟು ಮೂತ್ರದಿಂದರೆದು ನವೋ ||
ಜ್ವಲಚೂರ್ಣವಿಮಿಶ್ರಿತದಿಂ |
ವಿಲೇಪನಂಗೆಯ್ದು ಕಳೆಗೆ ದುಷ್ಟವ್ರಣಮಂ || ೪ ||

ಸುಡುವುದು ಮೆಕ್ಕೆಯ(ಕ್ಕದ)ಪುಡಿಯುಮ |
ನುಡುಗುವುದಾಬೂದಿಯಂ ಬಱಿಕ್ಕಮದಂ ಕ ||
ಪ್ಪಡದೊಳ್ ಸೋದಿಸಿ ಕೊಂಡಿ |
ಮ್ಮಡಿನೀರಂ ಪೊಯ್ದು ಮಂದವಪ್ಪನ್ನೆವರಂ || ೫ ||

ಅಡಿಸುವುದಯಸ್ಕಭಾಂಡದೊ |
ಳೊಡವೊಯ್ದುದು ಕಳ್ಳಿಯೆಕ್ಕೆಯಾಡಿನ ಪಾಲಂ ||
ಗುಡ ಗೋಮಹಿಷೀಕ್ಷೀರಮ |
ನಡುಗೆಯ ಪದನಱಿದು ಪೊಯ್ದು ತೊಳ(ಳು)ಸುಗೆ ಮತ್ತಂ || ೬ ||

ಗಿಳಿಮೂಗಿಯರಿಸಿನಂ ಪಿ |
ಪ್ಪಲಿಮೂಲಂ ತಿಗುಡೆ ವಾಣಿಜಂ ವಿಶ್ವಂ ಪಿ ||
ಪ್ಪಲಿ ನುಗ್ಗೆ ತಗ್ಗಿಯಿಸೆ |
ವಾಮಳಕ ಯವಕ್ಷಾರ ಸರ್ಷಪಂ ಬಜೆಯೆರಡುಂ || ೭ ||

ಕಂ|| ಪೊಸತಪ್ಪ ಸುಣ್ಣಮಂ ಸೋ |
ದಿಸಿ ಕಿಱಿದಂ ಕೊಂಡು ಭಸ್ಮರಸದೊಳದಂ ಯೋ ||
ಜಿಸಿ ಬಱಿಕಿನಿತೌಷಧಮುಮ |
ನಸುವೆಯೊಳರೆದಲ್ಲಿ ಪೊಯ್ದು ತೊಳಸುಗೆ ಮತ್ತಂ || ೮ ||

ಆಟ್ಟಿಬಿಸಿ ತಂದು ಕೆಯ್ಯೊಳ್ |
ಮುಟ್ಟದೆ ಪೆಱತೊಂದು ಕೊಡದೊಳಿಂಬಾಗಿ(ಯೆ)ರೆ ಬ ||
ಯ್ತಿಟ್ಟು ಪದನಱಿದು ಪೂಸುಗೆ |
ಬೊಟ್ಟಿಟ್ಟಂತಾಗೆ ಹಯದ ದುಷ್ಟವ್ರಣಮಂ || ೯ ||

ಮೂಗಿಯ ದಿವಸಂ ಬಿಸಿಲಾ |
ದಾಗಳ್ ಬೇಸಗೆಯ ದಿವಸ ಮೂದಂದು ಬಿಸಿಲ್ ||
ಪೋಗಲ್ ಘನಾಗಮಂ ಪೋ |
ದಾಗಳ್ ಮುಱಿಗಾಲಮೆಂ(ದ)ದು ಯೋಜಿಸುವುದದಂ || ೧೦ ||

ಅರಳಿಯನಡಸುವುದಿಂಬಾ |
ಗಿರೆ ದುಷ್ಟವ್ರಣದ ಬಳಸಿಯುಂ ಕ್ಷೀರರಸಂ ||
ಪರಿಯಲ್ಕೀಯದೆ ಬಱಿಯುಂ |
ಪರಿಸೇಕಂ ಗೆ(ಯ್ಗೆ)ಪಾಲೊಳಂ ತುಪ್ಪದೊಳಂ || ೧೧ ||

ಸುರಧೂಪದ ಬಣ್ಣಂ ಮೇ |
ಣರ(ರೆ)ನೇಱಿಲಪಣ್ಣ ಬಣ್ಣಮಾದೊಡೆ ಪುಣ್ಣಂ ||
ಪರಿಸೇಕಿಪ್ಪುದು ಮೃಶ್ವಾ |
ನರ ಚೂರ್ಣಮನಿಡಲ್ಕೆ ವೇಡ ತದನಂತರದೊಳ್ || ೧೨ ||

ವಾರುಣಿ ಮೂಲಮ ನಾಮಂ |
ಧಾರಾ(ದಾರ)ಕ್ಷೀರದೊಳೆ ತೊಯ್ದು ನಾಳೀವ್ರಣದಾ ||
ಬೇರೊಳ್ ಪಟ್ಟಿಯನಿಟ್ಟವ |
ಧಾರಿಸಿ ಸೋಧಿಸುಗೆ ಪುಣ್ಣೊಳಸುನಯದಿಂದಂ || ೧೩ ||

ಮಂದಾರದ ಪಾಲುಪ್ಪುಮ |
ನೊಂದಾಗಿಯೆ ಕಣಿಕದೊಡನೆ ಬತ್ತಿಯನಿಂ ||
ತೊಂದೆರಡು ದೆವಸದಿಂ ಕಳೆ |
ದಂದಾ ವ್ರಣಕೆಣ್ಣೆಯಿಟ್ಟೊಡಿರದು ಪಶಮಿಕುಂ || ೧೪ ||

ನವನೀತದ ಬತ್ತಿಯ ತಿಗು |
ಡವುಂಗರಂ ಕಳ್ಳಿ ಜೇನತುಪ್ಪಮಿವಂ ಕೂ ||
ಡುವುದರೆದು ನಿಚ್ಚಲುಂ ಪೂ |
ಸುವುದುಂ(ದಾ)ದುಷ್ಟವ್ರಣಂಗಳೆಲ್ಲಂ ತೀರ್ಗುಂ || ೧೫ ||

ಕಂ|| ಕೊಳಗುಳಿಕೆಯ ಪುಣಿಸೆಯ ಕೋ |
ಮಳಿಕೆಯ ನೆ(ದ)ಳೆದಳಿಸುವೆತ್ತುನಾಲಿಗೆಯೆಲೆಯಂ ||
ತಿಲತೈಲದೊಳರೆದೊಂದನೆ |
ವಿಲೇಪನಂ ಗೆಯ್ವುದಡಸಿ ನಾಳೀವ್ರಣಮಂ || ೧೬ ||

ಅಳೆವುದು ಪಲನೀರೊಳ್ ಪಾ |
ಲ್ಮರಗಳ ತಿಗುಡಂ ಸಮಂತು ನವಘೃತದೊಳದಂ ||
ಪೊರೆದಿಡುಗೆ ನಾಳಿವುಣ್ಗಳ |
ನಿರೂಹಣಂ ಮಾಳ್ಕುಮಲ್ಲಿ ಸಂದೆಯಮುಂಟೇ || ೧೭ ||

ಸ್ವಾಗತಂ|| ಕಾಕಜಂಘೆ ಮಧು ಮತ್ತಿಯ(ವು)ಂಗುರ್ |
ಪ್ರಾಕಟಂ ಘೃತಸಮೇತ ಮಿವಂ ನಿ ||
ವ್ಯಾಕುಲಂ ನೆಗ(ರ)ಪಿ ಪೂಸುಗೆ ಪುಣ್ಗಳ್ |
ಪೋಕುಮೆಂದನಕಲಂಕಚರಿತ್ರಂ || ೧೮ ||

ಕಂ|| ಉಪ್ಪಂ ಬೋಳಮುಮಂ ಸಮ |
ನಪ್ಪಂತಿರೆ ಕೂಡಿ ಪುರಿದು ಮಸಿಯಂ ನೇರಿ ||
ತ್ತಪ್ಪಿನಮೆಳ್ಳೆಣ್ಣೆಯೊಳರೆ |
ದೊಪ್ಪಿರೆ ಪೂಸುವುದು ಕ(ಖು)ಜ್ಜಿ ದುಷ್ಟವ್ರಣದೊಳ್ || ೧೯ ||

ಪರಲಾಗದಂತು ವಸ್ತ್ರಾಂ |
ತರದೊಳ್ ಸೋದಿಸಿದ ಸುಣ್ಣದೊಳಗರಿದಾಳಂ ||
ಬೆರಸಿಯದನಟ್ಟು ಪೂಸುಗೆ |
ತುರಗದ ದುಷ್ಟವ್ರಣಂಗಳೆಲ್ಲಂ ಕಿಡುಗುಂ || ೨೦ ||

ಶ್ವೇತೈರಂಡದೊಳಂ ಭ |
ಲ್ಲಾತಕ ಮಿವನರೆದು ಕೂಡಿ ತಿಲತೈಲದೊಳ ||
ಟ್ಟಾ ತೈಲವಿಲೇಪನದಿಂ |
ಕೀತೊಸಱುತ್ತಿರ್ಪ ನಾಳಿವುಣ್ಗಳ್ ಕಿಡುಗುಂ || ೨೧ ||

ಖಚರಪ್ಲುತ|| ಕೇರಗೊಟ್ಟೆ ಕರಂಜದ ಬೀಜಂ ಕೃಷ್ಣತಿಲಂ ಬೆರಸಿಂತಿವಂ |
ಕ್ಷೀರದಿಂದರೆದಾಡಿನ ಪಾಲೊಳ್ ಪೂಸುಗೆ ಬೆಚ್ಚನೆ ಮಾಡಿ ನೀರ್ ||
ಸೋರುತಿರ್ಪ................ಪುಣ್ಗಳ್ ಕ(ಖು)ಜ್ಜಿ ಕಱಂಗಿದೆ ತರ್ದುಗಳ್ |
ನೀರದಂ ಪವನಂಗೆ ಪಡಲ್ವಟ್ಟೋಡುವವೋಲ್ ಪರೆದೋಡುಗುಂ || ೨೨ ||

(ಸದ್ಯಃಕ್ಷತ)

ಕಂ|| ಗರುಗಮನಕ್ಕನುನಯದಿಂ |
ನರಮೂತ್ರಮನಕ್ಕೆ ಕನಕಪತ್ರಮನಕ್ಕಾ ||
ದರದಿಂದಂ ಕಲ್ಲುಪ್ಪಂ |
ಬೆರಸಿಯದಂ ಬಳಿಗೆ ಹಯದ ಸದ್ಯಃಕ್ಷತದೊಳ್ || ೨೩ ||

(ದುಷ್ಕಲಿ)

ಕಂ|| ಪಲವುಂ ಕಾಲದ ಪುಡ(ಣ್)ದು |
ಷ್ಕಲೆಗಟ್ಟಿದೊರ್ಡೊಳಗು ನೋೞ್ಪೊಡಂ ಕರ್ಗಿದೊಡಂ ||
ಬಲಿದೊಟ್ಟಿಗಟ್ಟಿ ತೋೞ್ಪೊರ್ಡ |
ಮಲಸದೆ ಮಾಡುವುದದಕೆ ದಹನಕ್ರಿಯೆಯುಂ || ೩೪ ||

ಅರೆದಿಡುಗೆ ಕೀತ ಪುಣ್ಗಳ್ |
ಸೊರೆ ಯೆಲೆಯುಂ ಮೂಱುನಾಲ್ಕುದಿವಸಂ ತದನಂ ||
ತರವೆಣ್ಣೆ ವಿಡುಗೆ ಮೇಣ್ಘೃತ |
ಪರಿಸೇಕಂಗೆಯ್ಗೆ ನಾಳೆ ಪುಣ್ಗಳ್ ಕಿಡುಗುಂ || ೩೫ ||

(ಸದ್ಯಃಕ್ಷತ-ದುಷ್ಟವ್ರಣ)

ಪೊಸತಪ್ಪ ಸುಣ್ಣಮುಂ ಪತಿ |
ಯಿಸುವುದು ಸದ್ಯಃಕ್ಷತಕ್ಕೆ ದುಷ್ಟವ್ರಣಕಂ ||
ಪೊಸಸುಣ್ಣಮನರ್ಕಕ್ಷೀ |
ರಸಮೇತಂ ಪೂಸಿ ಕಳೆಗೆ ದುಷ್ಟ ವ್ರಣಮಂ || ೩೬ ||

ನೊರೆವಾಲ್ ಸಾಮುದ್ರಂ ಭೃಂ |
ಗರಸಂ ಕನಕಾಂಬುಜ ಗೇಱುತುಪ್ಪಂ ಮತ್ತಂ ||
ಬೆರಸಿಟ್ಟು ಪೂಸೆ ಕಿಡುಗುಂ |
ತುರಗವ್ರಣಸಂಕುಲಂಗಳನಭಿನವಚಂದ್ರ || ೩೭ ||

ಮುನ್ನಿನ ಹಯಶಾಸ್ತ್ರಂಗಳ್ |
ಕನ್ನಡದೊಳ್ ಚಂದ್ರಮತಕೆ ಸಮನಲ್ಲಮದೇಂ ||
ಬಿನ್ನಣಮೊ ಪೇೞ್ಮೆನಿಸಿದ |
ಪನ್ನೆರಡನೆಯ ವ್ರಣಾಧಿಕಾರಂ ಸಾರಂ || ೩೮ ||

ಇಂತು ದ್ವಾದಶಾಧ್ಯಾಯಂ

(ವ್ರಣಾಧಿಕಾರಂ ಮುಗಿದುದು)

# ತ್ರಯೋದಶಾಧ್ಯಾಯಂ

## ಜ್ವರಾಧಿಕಾರಂ

ಕಂ|| ಕೆಂಪಕ್ಕುಂ ಮೂತ್ರಂ ಮೆಣ |
ಸಂ ಪೋಲ್ಕುಂ ಲದ್ದಿ ಮೇಹುಗೊಳ್ಳದು ಖಾಣ
ಕ್ಕಂ ಪಡೆದು ಬಾರದಶ್ರುಜ
ಲಂ ಪಾಯ್ಗುಂ ಜ್ವರವಿಕಾರವಾದೊಡೆ (ಹಯಕಂ)ತುರಗಂ || ೧ ||

ಜ್ವರಮೇಂ ಕಾರಣದಿಂದಂ
ತುರಗಕ್ಕಾಯ್ತೆಂದು ಬಗೆದು ಭಾವಿಸಿ ವೈದ್ಯಂ ||
ತುರಗಕ್ಕಂ ಮಾಡೆ[1] ಚಿಕಿತ್ಸಾ |
ವರಮಂ ತಾಂ ಕಾಯಮಱಿದು ಹಿತಲಂಘನಮಂ || ೨ ||

ಬೇವಿನ ಪಿಂಡಮನಿಕ್ಕುವು |
ದಾ ವಾಜಿಗೆ ಲವಣವಿರಹಿತಂ ಸಮವಾಯಂ ||
ಮೇವೊಡೆ ಕಱುಕೆಯ ಪುಲ್ ಬಿಸಿ |
ಲಾವೆಡೆಯುಂ ಮುಟ್ಟದಂತು ಕಟ್ಟಿಸುವುದದಂ || ೩ ||

ಪಿತ್ತಜ್ವರೋಪಶಮದ |
ತ್ಯುತ್ತಮಮಂ ಸ್ನೇಹವರ್ತಿಯಂ ಮಾಳ್ಪುದು ಬಾಯ್ ||
ಬತ್ತುವೊಡೆ ಕುಡುಗೆ ಕಳ್ಗೊಳ್ |
ಪಥ್ಯಂ ಪಿಪ್ಪಲಿಯುಮಿಂಗು(ಸೌ)ಸಂವರ್ಚಲಮಂ || ೪ ||

ನೊರೆವಾಲೊಳ್ ಮಧುವಂ ಶ |
ರ್ಕರೆಯುಮನೊಡಗೂಡಿಕೊಂಡು ವಾಜಿಗೆ ಪಾನಾಂ ||
ತರದೊಳ್ ಪ್ರಯೋಗನಿಪುಣಂ |
ಜ್ವರಹರಮಂ ಕ್ಷೀರವರ್ತಿಗೆ(ಕೆ)ಯನನುನಯದಿಂ || ೫ ||

ನುತಶಾಲ್ಯೋದನಮಂ ಜೇ |
ನತುಪ್ಪಮೆಱೆದೊಡೆ ಕಟು(ಟು)ಕೆಯುಂ ಮೇಯಿ(ವೋಹಿ)ಸಿ ಮಾ ||
ರುತಧೂಮೋಷ್ಣಾಂತರ ವ |
ರ್ಜಿತವಾಗಿರೆ ತಂದು ಕಟ್ಟುಗಂತಾ ಹಯಮಂ || ೬ ||

ಸುಟ್ಟು ಕುಮಾರಿಯ ಬೇರಂ |
ಘಟ್ಟಿಸಿ ಪಿಟೆದದಱ ರಸಮನೊಬ್ಬಳದನಿತಂ ||
ಕೊಟ್ಟು ಸಿತ ಹಸಿತಲವದೆ(ಲೆ) |
ಕಟ್ಟುಗೆ ಕೊರಲೊಳಗೆ ತುರಗದ ಜ್ವರಹರಣಂ || ೭ ||

1 ಚಿಕಿತ್ಸಾರವಂ

(ಶ್ಲೇಷ್ಮಜ್ವರ)

ಕಂ|| ಸುರಿಯೆ ಮುಖಲೋಚನಾಭ್ಯಂ |
ತರದಿಂ ಶ್ಲೇಷ್ಮಾಂಬು ರ್ಘೊಂ(ಜೋ)ಂಪಿಸುತ್ತುಂ ಮೇಹ(ಪ)ಂ ||
ಪರಿಹರಿಸಿ ನಿಂದೊಡಂ ಕಾ(ಂ) |
ತುರಗಂ ಶ್ಲೇಷ್ಮ[1]ಜ್ವರಸ್ಥನೆಂದಱಿವುದದಂ || ೮ ||

ತುರಗಕ್ಕಿಕ್ಕುಗೆ ತಂದೀ |
ಶ್ವರಿಯಂ ಮಧುವೆರಸಿ ಬಟಿಕೆ ಕಟಿವೆಯು ಕೂಟಿಂ ||
ಬೆರಸಿ ಮನೋಹರ ಮಾಗಿರೆ(ಯೆ) |
[ತರದಿಂದಂ]ಪೆಸಱ ಕಟ್ಟನಭಿನವಚಂದ್ರಾ || ೯ ||

‡(ಸನ್ನಿಪಾತಜ್ವರಂ)

ಪರವಶನಕ್ಕುಂ ತಿಟ್ಟನೆ |
ತಿರು(ರಿ)ಗುಂ ಮೂರ್ಛಾಸ್ರಮ [2]ಪ್ರಸನ್ನಂ ಮಲದೊಳ್ ||
ನೊರೆಯುಂ ನೆತ್ತರು ಮೊಯ್ಯನೆ |
ಪರಿಯುತ್ತಿರೆ ಸನ್ನಿಪಾತದ(ದಾ)ಜ್ವರಮುಕ್ಕುಂ || ೧೦ ||

ಕಾಣುತ್ತಿರೆಯಿರೆ ಯಿನಿಸಂ |
ಮಾಣದೆ ಪಲತೆಱದ ಚೇಷ್ಟೆಗಳ್ ತೋಱುವೊಡಾ ||
ಸ್ಥಾಣುಗಮಸಾಧ್ಯಮೆಂಬರ್ |
ಪ್ರಾಣಾಂತಂ ಸನ್ನಿಪಾತಮದು ವಿಷಮತರಂ || ೧೧ ||

(ವಾತಾತಿಸಾರ)

ಘೋರನೆ ಬಸಿಱುರ್ಚಿ ಗುದ |
ದ್ವಾರಂ ಗಂಭೀರ ಭಿನ್ನಮೇನೆಂಬುದು [3]ನಾ ||
ಣ್ಚಾರಣೆ ಗೆಯ್ಯುತ್ತಿರೆ ಯುದ |
ನಾರುಂ ವಾತಾತಿಸಾ: [4]ಮೆನ್ನದೊಳರರೆ || ೧೨ ||

ರಸದಾಳಿಂಬದ ದರ್ಭೆಯ |
ಪೊಸಬೇರುಂ ಬೆಟಲ ತಿಗುಡು ಮಧುಸಮೇತಂ ||
ರಸಮೊಸರೆ ತುಯ್ಯಲಟ್ಟಾ |
ಱಿಸಿ ಕುಡುವುದು ಮಧುವನೆಂದನಭಿನವಚಂದ್ರಂ || ೧೩ ||

ಮೊಸರೊಡನೆ ಯಷ್ಟಿಮಧುಕಂ |
ಪೊಸತುಪ್ಪಂ ಬೆಟಲ ಪಣ್ಣಿವಂ ಮುದದಿಂ ಭಾ ||
ವಿಸಿ ಮಧುವನೆಱೆದು ಹಯಕಿ |
ಕ್ಕಿಸುವುದು ವಾತಾತಿಸಾರಮಂ ಸ್ತಂಭಿಸುಗುಂ || ೧೪ ||

1 ಜ್ವರಾರ್ತ 2 ಪ್ರಸನ್ನಕ್ಕುಮಲದೊಳ್ 3 ಒಂದು ಬಾದನಾಚ್ಚಾರಣ 4 ಮೆನ್ನವರೊಳದೇ
‡ಸನ್ನಿಪಾತಜ್ವರದ ಔಷಧಿ ಹೇಳಿಲ್ಲ

(ರಕ್ತಾತಿಸಾರೆ)

ಕಂ|| ಬಿಸುಸುಯ್ಗುಂ ಬಡವಕ್ಕುಂ |
ಬಸವಳಿಗುಂ ದಾಹಮಕ್ಕುಗಾ ತಣ್ಪು(ಷ್ಪಿ)ಂ ತಾ ||
ಟಿಸುಗುಂ ಲೋಹಿತಮಂ ಮೂ |
ತ್ರಿಸುಗುಂ [1]ರಕ್ತಾತಿಸಾರದಿಂದಂ ತುರಗಂ || ೧೫ ||

(ಕಫಾತಿಸಾರೆ)

ಕರಮೆ ಬಡವಾಗಿ ಸುಯ್ಯು |
ತ್ತಿರೆ ಚಿಂತಾಕ್ರಾಂತನಾಗೆ ಪಿಪ್ಪಲಿಯಂ ತಂ ||
ದರೆದು ಘೃತಯುಕ್ತದಿಂದಂ |
ತುರಗಕ್ಕಿಕ್ಕುಗೆ ಕಫಾತಿಸಾರಂ ಕೆಡಗುಂ || ೧೬ ||

(ಕಜ್ಜಬೇನೆ)

ಆರಸಿನ ಮೇಣ್ ಕೋಷ್ಠಂ ಸಿತ |
ಸರುಷಪಮಂ ಕೂಡಿಕೊಂಡು ಸದ್ಯಃಕ್ಷಾರಂ ||
ಬೆರಸಟ್ಟು ಮೂತ್ರದಿಂದಂ |
ತುರಗದ ಖಜ್ಜಿಗೆ ವಿಲೇಪನಂ ಗೆಯ್ವುದದಂ || ೧೭ ||

ಮರದರಸಿನಮರಸಿನ ಮು |
ತ್ತರಣಿ ತಿಲಂ ಗೇಱಿಗೊಟ್ಟಿಯಿಂತಿವನೊಂದಾ ||
ಗರದೊಳ್ಪೆಣ್ಣೆಯೊಳಟ್ಟಾ |
ದರದಿಂದಂ ಪೂಸೆ (ಖ)ಕಜ್ಜಿಗುತ್ತಂ ತೀರ್ಗುಂ || ೧೮ ||

ಎರಡು ಮರಸಿನವ ಎಮುಷ್ಪಂ |
ಬೆರಸಾಪಡೆ ಕಕ್ಕೆಯಂ ಸವಿಸ್ತರದಿಂ ತಂ ||
ದರೆದಟ್ಟು ಮೂತ್ರದಿಂದಂ |
ತುರಗದ ಖಜ್ಜಿಗೆ ವಿಲೇಪನಂ ಗೆಯ್ವುದದಂ || ೧೯ ||

ಕಳ್ಳಿಯುಮೆಕ್ಕೆಯುಮಂ ಸು |
ಟ್ಟಿಳ್ಪಂ ಮಸಿಯಾಗಿ ಪುರಿದು ಚೂರ್ಣಸಮೇತಂ ||
ತೆಳ್ಪನೆ ಪೂಸುಗೆ ಮೂತ್ರದೊ |
ಳೊಳ್ಪಿತ್ತಾ(ಯೂ)ಗೂಱಲಿಟ್ಟು ಸುಕರವಿಲಾಸಾ || ೨೦ ||

ನರ ತುರಗಗೋಕುಱಿಕ್ಕಾ
ತೆಱದಿಂದಂ ಖ(ಕ)ಜ್ಜತೋಱೆ ಮತ್ತೊಂದನೆ ವಿ ||
ಸ್ತರದಿಂ ಪೇೞ್ವೆಂ ಸಮನಾ |
ಗಿರೆ ಪೂಸುಗೆ ಪುಲಿಗಿಲೆಣ್ಣೆಯಂ ಸುಣ್ಣಮುಮಂ || ೨೧ ||

1 ರಕ್ತಾತಿಸಾರಾಂಸ್ತಂಭಿಸುಗುಂ 2 ಟಿರಸಟ್ಟು 3 ಕ್ಕಾದರದಿಂ

ಕಂ|| ಪುಡಿಮಾಡಿ ಸಜ್ಜರಸಮಂ |
ಕೊಡುವುದು ನವಘೃತಸಮನ್ವಿತಂ ತ್ರಿದಿನಂ ಕೊ ||
ಟ್ಟೊಡೆ ತರ್ದುಃ ಖ(ಕ)ಜ್ಜಿಯೆರಡುಂ |
ಕಿಡುಗುಂ ದಿವ್ಯಪ್ರಯೋಗಮಭಿನವಚಂದ್ರಾ || ೨೨ |

(ಮರಣಚಿಹ್ನೆ)

ಎವೆಯಿಕ್ಕದೆ ಕಣ್ಣಂ ಮು |
ಚ್ಚಿ ಮುಖಂ ನೀರೋಡಿ ಚೇಷ್ಟೆಗೆಟ್ಟು ಕರಂ ಬಾ ||
ಲಮನೊಲ್ದಲ್ಲಾಡದೆ ರ |
ಕ್ತಮುಮಂ ಮೂತ್ರಿಸುವ ತುರಗಕಕ್ಕುಂ ಮರಣಂ || ೨೩

ಹರಿಣಿ|| ಸುರಿಯೆ ಮುಖದಿಂ ಶ್ಲೇಷ್ಮಂ ಕೃಷ್ಣಾರುಣಂ ಕ್ರಿಮಿ ಲದ್ದಿಯೊಳ್ |
ಪರಿಯೆ ಭರದಿಂದಂ ತಾಂ [1]ಮೆಯ್ಯಿಕ್ಕುತುಂ ಬಲಿದೇಱುತುಂ ||
ಪೊರಳೆ ಕರಮಾಪತ್ತಿಂ ಮೆಯ್ವಿಟ್ಟು ಬೀಸದೆ ಬಾಲಮಂ |
ತುರಗಮಿರೆ ನಿರ್ವ್ಯಾಜಂ ಸಾಯ್ಗುಂ ಹಯಕ್ಕದು ನಿರ್ಣಯಂ || ೨೪

ಕಂ|| ಪೆಡತಲೆಯ ನರಂ ತೆಗೆದೊಡೆ |
ಮಿಡುಕದೆ ಸೈತಿರ್ದು ಬಾಲಮಂ ಕೊರಲುಂ ಮ ||
ತ್ತೆಡೆವಿಡಿ(ಡ)ದುಡಿರದೆ ಪಣೆಗಂ |
ಣಡಸಿ ಕರಂ ಸುಯ್ಯೆ ಬಾೞಲಾಱದು ತುರಗಂ || ೨೫ ||

ಕೊರಲುರುಗಿ ನಾಸಿಕಾಭ್ಯಂ |
ತರದಿಂದರುಣಾಂಬು ಪೊಣ್ಮೆ ಮುಖದಿಂ ಶ್ಲೇಷ್ಮಂ ||
ಸುರಿಯೆ ಬಸವಳಿದು ಬಾಲಂ |
ಪರಿಯೆ ಗತಪ್ರಾಣನಕ್ಕುಮಭಿನವಚಂದ್ರ || ೨೬ ||

(ರಸವಿಕಾರದೋಷಂ)

ನೊರೆವೆರಸು ಲದ್ದಿ ಪೋಱಮಡೆ |
ತುರಗಂ ದಡದಡಿಸಿ ನಡೆಯಲಾಱದೆ ಕಾಲ್ಗೆ ||
ಟ್ಟಿರೆ ರಸವಿಕಾರದೋಷಂ |
ತುರಗಮುಖಕ್ಕಕ್ಕುಮೆಂದನಭಿನವಚಂದ್ರಂ || ೨೭ ||

ಇಪ್ಪೆಯ ಪೂವೊಬ್ಬಳಮಂ |
ತಪ್ಪದಮಂ ನೀರೊಳರೆವುದಾವಿನ ಪಾಲೊಳ್ ||
ನೇರ್ಪಡೆ ಕಲಸಿ ಹಯಕ್ಕೆ ಸ |
ಮರ್ಪಿಸುವುದು ರಸವಿಕಾರಮಾಗಳೆ ಕಿಡುಗುಂ || ೨೮ ||

ಪದನಱಿದು ಮುನ್ನ ಹೇಮಂ |
ತದ ಪಿಂಡಮನಿಕ್ಕಿ ಗರ್ದುಗನಿಕ್ಕುಗೆ ಬೞಿಯಂ ||
ತ್ರಿದಿನಂ[ತಾಂ] ಲೇಪಂ ಗೆ |
ಯ್ದೊಡೊಡುಬೞಿಯದೆ ಕಿಡುಗುಮನಿತಱೊಳ್ ರಸದೋಷಂ || ೨೯ ||

ಕಂ|| ಉಪ್ಪು ಪುನರ್ನವಿ ಮೂಲಂ |
ಪಿಪ್ಪಲಿ ಯೇಲಕ್ಕಿ ಲೊಕ್ಕಿಗರುಗ ನಾಗರಮುಮಿವಂ ||
ತಪ್ಪದೆ ಸಮನಾಗಿರೆ ಪ್ಪುದು |
ವಪ್ಪಿನವರೆಧಿಡುಗೆ ಗುದದೊಳಂ ಮೇಢ್ರದೊಳಂ || ೩೦ ||

ಪುರಿವುದು ಕಡುವಿಸಿಯುಪ್ಪಂ |
ತಿರಿ ಮಳಲಂ ನಾಂದ ಸೀರೆಯೊಳ್ ಪೊಯ್ದು ನಯಂ ||
ಬೆರಿಸಿಯೆ [1]ಸೇಕಂ ಗೆಯ್ವುದು |
ಸಿರದಿಂ ನಿಟ್ಟೆಲ್ವುವಿಡಿದು ಜಘನಂಬರೆಗಂ || ೩೧ ||

ಮಾಗಿಯು ಮಟಿಗಾಲಕ್ಕಿಂ |
ಬಾಗಿರೆ ಸೇಕಿಪುದು ಸೇಕಿಸಲ್ತಕ್ಕೆಡೆಯಂ ||
ಮಾಗಿಯೆ ಪೋಗಲೊಡಂ ಗ್ರೀ |
ಷ್ಮಾಗಮದೊಳ್ ಬಿಸಿಲೆ ಸಾಲ್ಗುಮಾಗದು ಸೇಕಂ ||೩೨ ||

(ಮೃಗಜೃಂಭಾರೋಗ)

ಆಳಿಮೇಹ(ವು)ಮೋಯೆ ಕಣ್ಗಳ್ |
ಕುಟಾಯೆ ಕೊರಲ್ ನಸೆಯೆ ನಟ್ಟುನಿಲೆ ಕಿವಿ ಬಸಿಜ ||
ಕ್ಕುಟಿಸೆ ದಡದಡಿಸಿ ಕಾಲ್ಗಳ್ |
ನೆಟಿಯೆ ತುರಂಗಮದ ಕುತ್ತಮದು ಮೃಗಜೃಂಭಂ || ೩೩ ||

ಬಿಸಿಲೊಳದಂ ಕಟ್ಟಿಸುವುದು |
ಬಿಸಿಲಿಲ್ಲದೆ ಗಾಳಿ ಸೀತಮುಂ ದುರ್ದಿನಮುಂ ||
ಮಸಗಿದೊಡೆ [2]ವ ಸಮುದಂ ಸೇ |
ಕಿಸುವುದು ನಿಟ್ಟೆಲ್ವುವಿಡಿದು ಜಘನಂಬರೆಗಂ || ೩೪ ||

ಬಜೆ ಕೊಡಸಿಗೆ ವಾ(ಳ)ಣಿಜವತಿ |
ಬಜೆ ಕೋಷ್ಟಂ ಪಾಲು ಪಂಚಲವಣಂ ದಹನಂ ||
ಗಜಪಿಪ್ಪಲಿ ಮಗಧೋದ್ಭವ |
ಮಜಮೋದಂ ತ್ರಿಫಲೆ ನಾಗರಂ ತ್ರಿಸುಗಂಧಂ || ೩೫ ||

*ಇಂತಿನಿತೌಷಧಮುಮನೋ |
ರಂತಿರೆ ಪುಡಿಮಾಡಿ ಬಿಸಿಯ ನೀರೊಳ್ ಪೆಱತೇಂ ||
ಭ್ರಾಂತಿಲ್ಲದೆ ಕುಡೆ ಮೃಗಜೃಂ |
ಭಂ ತಡೆಯದೆ ಕೆಡುಗುಮೆಂದನಭಿನವಚಂದ್ರಂ || ೩೬ ||

1 ಶಾಕಂ 2 ಮಳಲುಮಂ ?

* ಇನಿತೌಷಧಮು ಮನೋರಂ |
ತಿರೆ ತಾಂ ಪುಡಿಮಾಡಿ ಬಿಸಿಯ ನೀರೊಳ್ ಪೆಱತೇಂ ||
ಭ್ರಾಂತಿಲ್ಲದೆ ಕುಡೆ ಮೃಗಜೃಂ |
ಭಂ ತಡೆಯದೆ ಕೆಡುಗುಮೆಂದನಭಿನವಚಂದ್ರಂ ||

—ಅರ್ಧ ಕಂಡದಲ್ಲಿ ಬೇರೆ ಪ್ರಾಸಿರುವ ಈ ಕಂದವು ಒಂದು ಪ್ರತಿಯಲ್ಲಿದೆ.

ಕಂ|| ಸರಳಂ ಕೋಷ್ಠಂ ಮಂಜಿ |
ಷ್ಠೆ ರಾಷ್ನೆ ಬೆಳ್ಳುಳ್ಳಿ ಸೈಂಧವಂ ತಗರಮಿವಂ ||
ಕರಿಯಾವಿನ ನೊರೆವಾಲೊಳ್ |
ಬೆರಸಿ ಬೞಿಕ್ಕೆಣ್ಣೆವೊಯ್ದು ನೆಯ್ [1]ನಿಲ್ವಿನೆಗಂ || ೩೭ ||

ಪದನಱಿ[2]ದಟ್ಟು ಯವಕ್ಷಾ|
ರದ ಪುಡಿಯಂ ತಳಿದು ಕಳೆದುಕೊಂಡೆಣ್ಣೆಯನಾ ||
ಱಿದ ಬಿಸಿಯ ನೀರನೆಱೆದಂ |
ತದನೂಡುವುದದನೆ ಮಾಳ್ಪುದಭ್ಯಂತರಮಂ || ೩೮ ||

ಸೆರೆವಿ(ಯಿ)ಡುವುದಸ್ರುಪಾತದೊ |
ಳುರದೊಳ್ ಮನ್ಯುಪ್ರದೇಶದೊಳ್ ಬಾಹುಗಳೊಳ್ ||
ಸುರೆಯೊಳ್ ಪ್ರಪಾನ ಶಂಕಾ(ಖಾ)ಂ |
ತರದೊಳ್ ವಿಹಿತ ಪ್ರಮಾಣವೇದ[3]ವಿದಗ್ಧಂ || ೩೯ ||

ಪುರಿದ ಮಳಲಿಂದೆ ಸೇಕಂ |
ಸಿರದಿಂ ನಿಟ್ಟೆಲ್ವುವಿಡಿದು ಜಘನಂಬರೆಗಂ ||
ಬರೆವುದು ಕೆಯ್ಗೞಾವಾದೊಡೆ |
ಸಿರದಿಂ ನಿಟ್ಟೆಲ್ವುವಿಡಿದು ಜಘನಂಬರೆಗಂ || ೪೦ ||

(ಹರಿಣರೋಗ)

ಬಸಿಱೆತ್ತಿ ಕಟ್ಟಿ ಮೆಯ್ ಕೀ |
ಲಿಸಿದಂತಿರೆ ಲೋಳೆ ಸುರಿಯೆ ಕಣ್ಣಂ ಬಿಟ್ಟು ||
ಬ್ಬಸಮಾಗಿ ಸುಯ್ಯೆ ಕಿವಿ ತೆ |
ತ್ತಿಸಿದಂತಿರೆ ಬೀಸೆ ಬಿಸುಟು ಖಾಣಾದಿಗಳಂ || ೪೧ ||

ದಡದಡಿಸೆ ಪದಂಗಳ್ ಪ |
ಲ್ಲಡಿಗಿಱಿದಿರೆ ಬಾಲವಾಲಬೀಟಲತೆಱದಿಂ ||
ಮಿಡುಕದಿರೆ ಹರಿಣರೋಗಂ |
ತಡೆಯದೆ ಮಡಿಗುಂ ಚಿಕಿತ್ಸೆಗೆಯ್ಯಲ್ವೇಡಾ(ಡಂ) || ೪೨ ||

ಜ್ವರಮತಿಸಾರಂ ಖಜ್ಜಯು |
ಮರಿಷ್ಟಮುಂ ಖಾಸ ಮೆರಳೆಗುತ್ತಮುಮನುದಾ ||
ಹರಿಸಿದ ನುತಚಂದ್ರಮತಾಂ |
ತರದಧ್ಯಾಯಂ ತ್ರಯೋದಶಂ ಜಗಕೆ ಹಿತಂ || ೪೩ ||

ಇಂತು ತ್ರಯೋದಶಾಧ್ಯಾಯಂ

1 ನಿಲುವನ್ನೆಗಂ, ನಿಲುವಿನೆಗಂ 2 ದುಪ್ಪ 3 ವಿದಗ್ಧಂ, ವಿಧಜ್ಞಂ, ವಿಧಿಜ್ಞಂ ವಿಮಜ್ಞಂ

# ಚತುರ್ದಶಾಧ್ಯಾಯಂ

## ತಾ ಳು ರೋ ೀ ಗ

ಕಂ|| ಕಡುವಿಸಿಲೊಳಿರ್ದ ತಾಳುಗೆ |
ಪುಡಿವಿಡೆ ಮುಖಮೊಣಗೆ ನೀರನಾಹಾರಮುಮಂ ||
ಪಡೆಯದುಪವಾಸದಿಂದಂ |
ದಡದಡಿ(ಪ)ಸೆ ತುರಗಕೆ ತಾಳುರೋಗಂ ತೋರ್ಕುಂ || ೧ ||

ತೆಗೆದಡಸಿ ಮೇಯಲಲಸಿದ |
ಬಗೆವೆರಸಿನಿಸಿನಿಸು ಮೇವೊಡಂ ಮತ್ತಂ ತಾ ||
ಳುಗೆ ಕಂದಿ ರೋಮಮೊದಲೊಳ |
ಪುಗೆ ಕಣ್ಗಳ್ ತಾಳುರೋಗಮೆಂದಱಿವುದದಂ || ೨ ||

ಸೆರೆವಿಡುವುದಸ್ರುಪಾತಾಂ |
ತರದೊಳ್ ಗೋಮೂತ್ರತೈಲ ಸೈಂಧವಮಂ ತಂ ||
ದೊರಸುವುದು ತಾಳುದೇಶಾಂ |
ತರಮಂ ತರಗಕ್ಕೆ ತಾಳುರೋಗಂ ತೀರ್ಗುಂ || ೩ ||

(ಜಿಹ್ವೆ ರೋಗಂ)

ಕರ(ಳ)ದಾಗಿ ಬಾತು ನಾಲಗೆ |
ಪಿರಿಯ ಪುಗುಟ್ ನೆಗೆದು ತೋಱೆ ಶ್ಲೇಷ್ಮಂ ಮುಖದಿಂ ||
ಸುರಿಯೆ ಕೊಳೆನಾಱೆ ಮೋಹಂ |
ಪರಿಹರಿ(ಕಲಿ)ಸಿರೆ ಜಿಂಹೆರೋಗವೆಂದಱಿವುದದಂ || ೪ ||

ಪಿಪ್ಪಲಿ ಮಧು ಕೋಷ್ಠಂ ಭಜೆ |
ತುಪ್ಪಂ ಬೆಳ್ಳುಳ್ಳಿ ಸೈಂಧವಂ [1]ರಜನಿಯುಗಂ ||
ತಪ್ಪದನಿತುಮಂ ಸಮಸಮ |
ಮುಪ್ಪಿನೆಗಂ ಪುಗುಟನೊಡೆದು ಪೂಸುಗೆ ಮತ್ತಂ || ೫ ||

ಅರೆದೂಡುಗೆ ಕಳ್ಳೊಳ್ ನಾ |
ಗರ ಕೋಷ್ಠ ಪಟೋಲಪಥ್ಯಮಂ ವಾಜಿಗನಂ ||
ತರದೊಳ್ ನಸ್ಯಂಗೈಸುವು |
ದರೆದಾಡಿನ ಪೊಸಘೃತಂಗಳೊಳ್ ಸೈಂಧವಮಂ || ೬ ||

(ಗಳ ಗ್ರಹ)

ಕೊರಲು ಮಣಾಗು(ಣಲು)ಗಳ ನಡುವುಂ |
ತುರಗದ ಕದಪುಗಳುಮತಿಭಯಂಕರಮಪ್ಪಂ ||
ತಿರಿ ಬಾತು ತೋಱೆ ಬಾಯಿಂ |
ಸುರಿಯುತ್ತಿರೆ ಲೋಳೆ ಯದು ಗಳಗ್ರಹಮಕ್ಕುಂ || ೭ ||

---

1 ಲವಣ

ಕಂ|| ಎರಡುಂ ಬಜೆ ಪಿಪ್ಪಲಿ ನಾ |
ಗರವನಲಂ ಲಶುನ ಸರ್ಷಪಂಗಳ್ ಸಮನಾ ||
ಗಿರೆ ಕೂಡಿ ನಸ್ಯಮಂ ಮಾ |
ಡುರೆ ಸೇಕಂ ಗೈಯೆ ಬಟ್ಟಯನಭಿನವಚಂದ್ರಾ || ೮ ||

ಇಂತೀ ಪೇಟ್ಟೌಷಧದಿಂ |
ದಂ ತೀರದುದರ್ಕೆ ಬರೆಯನಿಡುಗನುನಯದಿಂ ||
ದಂತಿರೆ ತೀರದುದರ್ಕಂ |
ಭ್ರಾಂತಿಲ್ಲದೆ ಮಾಟ್ಕೆ ರಕ್ತವಿಸ್ರಾ(ಶ್ರಾ)ಣನ(ವಣ)ಮಂ || ೯ ||

(ಶೋಫ ರೋಗ)

ಎರಡು ವಿಷಾಣದ ನಡು ಬಾ |
ತಿರೆ ದ್ರೋಣ(ಣಿ) ಕೆಡುಗನುನಯದಿಂ ತೀರದುದ ||
ರ್ಕಂತಿರೆ ಮೃದುಕಠಿಣಮಾಗು |
ತ್ತಿರೆ ಪಿತ್ತಜವಾತಜಂಕಪಾತಿಗವೆಂಬರ್ || ೧೦ ||

ಚಿತ್ರಕಮತಿಬಜೆ[1] ದಂತಿ ಕ |
ಟುತ್ರಿತಯಂ ಕಾಗೆದೊಂಡೆ ಗಿಳಿಮೂಗಿಯುಮಂ ||
ಮೂತ್ರಸಮೇತಂ ಬುಧಜನ |
ಮಿತ್ರನವಂ ತಂದು ಪೂಸೆ ಶೋಫಂ ಕೆಡುಗುಂ || ೧೧ ||

ಪೂಸುಗೆ ಭಲ್ಲಾತಕ ನಿ |
ರ್ಯಾಸಮನನಲಾಸುಷ(ರ)ಕ್ಷಮಾದೊಡೆ ಪೆಱತೇಂ ||
ಪೂಸುವುದು ನರಪುರೀಷಮ |
ನಾಸುರವಾಗಿರ್ದ ದುಷ್ಟಶೋಫಂ ಕಿಡುಗುಂ || ೧೨ ||

(ಉಲೂಕಪಾ(ವಾ)ತ)

ಸ್ಫುರೆ ಜಾನು ಜಂಘೆ ಕೂರ್ಚಾಂ |
ತರಂಗಳೊಳ್ ಶೋಫಮಾಗಿ ಪುಣ್ಗಳ್ ಮೂಡು ||
ತ್ತಿರೆ ಪುಣ್ಗಳ ಬಾಯೊಳ್ ಪಾ |
ಯ್ತುರೆ ರಕ್ತಮುಲೂಕಪಾ(ವಾ)ತನಭಿನವಚಂದ್ರಾ || ೧೩ ||

ಚಂ|| ಪುಲಿಗಿಲ ಕೊಟ್ಟೆ ಕಬ್ಬಿನ ರಸಂ ಬಜೆ ಪಿಪ್ಪಲಿಮೂಲ ಮುಪ್ಪಿಪಿ |
ಪ್ಪಲಿ ರಜನೀದ್ವಯಂ ಸರುಷಪಂ ದಹನಂ ಕನಕಂಗಳೆಂಬಿವಂ ||
ಕಲಸಿ ಗವಾಂಬುವಿಂ ತೆರ(ಱು)ಡು ಮೂತ್ರದೊಳಿಂತವನಟ್ಟು ಕೊಟ್ಟುವಮಂ |
ದಲಸದೆ ಪೂಸಿದಂದು ಕಳೆಗುಂ ಚರಯೋಗಮುಲೂಕಪಾಕ(ವಾತ)ಮಂ || ೧೪ ||

ಕಂ|| ತಱಿಯದ ಮತ್ತಿಯ ಮರನೆರ |
ಡಱ ಪಗಿಸಂ ತ್ರಿಫಲೆ ಪಂಚಮೂಲಮಿವಂ ನೀ ||
ರೆಱೆಯುವೆ ಪುಡಿಗೆಯ್ದು ದಱೊಳ |
ಗೆಱೆವಷ್ಟಮಭಾಗೆಯಾಗೆ ತಿಲತೈಲಮುಮಂ || ೧೫ ||

---

1 ದಂತಿಯೆನಿಪ್ಪುದಕ್ಕುರುಜೆ ಪಾತ್ತರು ಕಟು(ಕ)ತ್ರಿತಯಂ (ಈ ಭಾಗ ಹೆಚ್ಚಾಗಿ ಕಂಡದಲ್ಲಿ ಸೇರಿದೆ)

ಕಂ|| ಅದನಂತಾಗಳೆ ಗೋಮೂ |
ತ್ರದೊಳಡಿಸುವುದಾಗಳೆಣ್ಣೆ ಚತುರಂಶಂ ಪೆ ||
ರ್ಚಿದ ಗೋಮೂತ್ರವನೆಱೆ ಬ |
ತ್ತಿದುದೆಂಬಿನೆಗಂ ವಿಲೇಪಮಂತಾ ತೈಲಂ || ೧೬ ||

(ಬಡವಿಗೆ)

ಬೇವಿನ ಕಷಾಯದೊಳ್ ಪೊ |
ಯ್ದಾವರ್ಜಿಸಿ ಪೆಸಱಕಟ್ಟು ಮಧುಘೃತದೊಳದಂ ||
ಭಾವಿಸಿ ಹಯಶಾಸ್ತ್ರಗಮ |
ಕೋವಿದರದಱೊಳಗೆ ಸುಂಠಿಯಂ ಪಿಪ್ಪಲಿಯಂ || ೧೭ ||

ಪುಡಿಮಾಡಿ ಕೂಡಿ ಕೊಡುವುದು |
ಬಡವಿಗೆ ಭೋಜನವನೇೞುದಿವಸಂಬರೆಗಂ ||
ತೊಡೆ ಜಾನು ಜಂಘೆ ಕೊರ್ಚೆಯ |
ನೊಡೆಹೊಯ್ದುಗುತಿರ್ಪ ನಾಳಿವುಣ್ಗಳ್ ಕಿಡುಗುಂ || ೧೮ ||

ವಾಮಿಗನುದ್ರೋಣಿಕೆಗಂ |
ಸಾಮಾನ್ಯ ಮುಳೂಕ ಪಾ(ವಾ)ತಮು(ಕ)ಂ ನಿರ್ದ್ರವಿಗಂ |
ಮಾರ್ದ(ನಿ) ? ವಿಚರ್ಚಿಕೆಯೆಂ |
ಬಾಮಯಕಂ ಶಸ್ತ್ರವಿಱಿದು ಬಱಿವುದು ಕೇಱಂ || ೧೯ ||

ತೊಡೆ[ಗಳ] ಜಘನದ ಪಾದೆರ |
[1] ಡೆಡೆಗಳ್ ಪುಣ್ಣಾಗೆ ಪೂಸುವುದು ಘೃತಮುಮಂ ||
ಕುಡುವುದು ಜೀವಣಿಗೆಯ ನೋ |
ಗಡಿಸದೆ ಮುಂ ಪೇೞ್ದ ರುಜೆಗಮಯ್ದುಂತೆಱದಿಂ || ೨೦ ||

ಪರಿದಱತು ಬಂದು ನೀರಂ |
ಪಿರಿದುಂಡೊಡಮುಂಡು ಪರಿದೊಡಂ ವಿಪರೀತಂ |
ಬೆರಸುವೊಡಂ ಬುಧ ಜಲ |
ಗರಮುಕ್ಕುಂ ವಾಜಿಗೆಂದನಭಿನವಚಂದ್ರಂ || ೨೧ ||

ಪೊರ್ಕುೞಿ ಕೆಳಗಿರ್ಬ್ಬೆರಲೊಳ್ |
ಪೊರ್ಕುೞಿ ಮೇಲೆಂಡು ಕೆಲದೊಳೊರ್ಬ್ಬೆರಲೊಳ್ ತು ||
ರ್ಯಕ್ಕೆ ಹಿತಮಾಗಿ ಕುತ್ತುಗೆ |
ಪಕ್ಕಾಗಿರೆ ಶಸ್ತ್ರದೊಳ್ ಚತುರ್ಥಾಂಗುಲಮಂ || ೨೨ ||

1 ಡೆಡೆಗಳೊಳಂ ಪುಣ್ಣಳಾಗೆ ಪೂಸುಗೆ ಘೃತಮಂ (ಎಂದಿರಬಹುದು)

ಕಂ|| ಕೊಱೆದಿಂಬಾಗಿರೆ ಪರ್ದಿನ |
ಗಱಿಯನದಂ ಗ(ನ)ಗೆಮಾಡಿ ಪುಣ್ಣೊಳಗಿಟ್ಟೇ ||
ತೆಱದಿಂ ಕಳೆಯೆ [1]ತುರಗಂ |
ಪಱಿದಂತಿರೆ ಧಾರೆವಿಟ್ಟು ನಿಶ್ಶೇಷಿಸುಗುಂ || ೨೩ ||

ಶೋಧಿಸಿದಿಂಬುಳಿಯಂ ಸಂ |
ಶೋಧಿಸಿ ಪುಣೊಳಗೆ ಬಿಡುಗೆ ಮಧುಘೃತಮಂ ನಿ ||
ರ್ವ್ಯಾಧಿ ಹಯಕ್ಕಕ್ಕುಂ ಪುಣ್ |
ಬಾಧಿಸ(ಸಿ)ದಂತಾಗಿರೆ ಸೇಕ ಗೆಯ್ಯೆಣ್ಣೆಗಳಿಂ || ೨೪ ||

(ಶೋಫಕ್ಕೆ)

ಉರದಿಂದಮುಭಯ ಪಕ್ಷಾಂ |
ತರದಿಂದಂ ಕ್ರೋಡ ಮೂಲದಿಂದಂ ಶೋಫಂ ||
ಪರೆದು ಪರ(ರಿ)ಕಲಿಸಿ ತೋರ್ಪೊಡೆ |
ಸೆರೆವಿಡುವುದು ಪೂರ್ವಪಾದದೊಳ್ ನಿಪುಣತೆಯಿಂ || ೨೫ ||

ಗಿಣಿಮೂಗ ದೊಂಡೆಯನರೆದ |
ದಱೊಳಗೆಱೆದಾ ಬೇವಿನ ಕಷಾಯಮಂ ಪೂಸುಗೆ ಮ ||
ರ್ದ್ದಱಿವವರು ಮಱಿಯದವರುಂ |
ಪೆಱತೇವುದಿದೊಂದೆ ಮರ್ದ್ದು ಶೋಫಾಪಹರಂ || ೨೬ ||

ಕೊ(ಕೆ)ಂತಲೆಯನ ಗೆ(ಗ)ಡ್ಡೆಯ ನೋ |
ರಂತಿರೆ ಕೋಱೆಯೊಡನೆ ಸಣ್ಣಮಪ್ಪಿನಮರೆದು ||
ಪ್ಪಂ ತಳೆದು ಪೂಸೆ ಕಿಡುಗುಂ |
ಭ್ರಾಂತಿಲ್ಲದೆ ದುಷ್ಟಶೋಫೆಯೆನಿತೊಳವನಿತುಂ || ೨೭ ||

ಕುನಿಯುನ ಪೆಣನಂ ವಾಲ್ಮಿಕ |
ಮನಗುಬ್ದದ ನಡಸಿ ಕಡಿದು ಮಣ್ಣಂ ಸು(ಸ)ಣ್ಣಂ ||
ಸಮನಿರಿಸಿ ಶಲ್ಯಮಂ ಮ |
ಣ್ಣಾನೆ ಮೆತ್ತಂತರಿಸಿ ಬಯ್ತು ತನ್ಮೃತ್ತಿಕೆಯಿಂ || ೨೮ ||

* ಆಸುವೆಯೊಳರೆವುದು ತಗ್ಗಿಯ |
ರಸಮಂ ಪೊಯ್ದುಟ್ಟು ಬೞಿಕೆ ಲೇಪಿಸುವುದದಂ ||
ಪೆಸರಱಿಯದ ಬಾಹಂ ಕೋ |
ಳ್ಮಸಗಿರ್ದ ವಿಷಂಗಳೆಲ್ಲ ವಿರದುಪಶಮಿಕುಂ || ೨೯ ||

---

1 ತದಂಗು, ತಡಂಗು

*ಎಲ್ಲಾ ಪ್ರತಿಯಲ್ಲೂ – ಈ ಸ್ಥಳದಲ್ಲಿ ಎಂದರೆ 'ಅಸುವೆ' ಎಂಬ ಪದದ ಹಿಂದೆ 'ಅಂಮಿಕಲ್ಲು' ಎಂದು 'ಅಸುವೆ' ಶಬ್ದಾರ್ಥವನ್ನು ಬರೆದಿದೆ, ಆ ಶಬ್ದಾರ್ಥವು ಗ್ರಂಥಕ್ಕೆ ಸಂಬಂಧಿಸಿದುದಲ್ಲ.

ಕಂ|| ಕಾಸದ ಚಿಕ್ಕಣಗೆಸಱಿಕೊಳ್ |
ಸಾಸಿವೆ (ಸವಿ) ಕಲ್ಲುಪ್ಪು ಕಣಿಕಮುದ್ಧಿನಪುಡಿಯುಂ ||
ಬೇಸಱದೆ ಕೂಡಿ ಕುದಿರೆಗೆ |
ಪೂಸುಗೆ ಕಡು[ಮಂದ]ವಾಗಿ ಶೋಫಂ ಕಿಡುಗುಂ || ೩೦ ||

ಉಪೇಂದ್ರವಜ್ರಂ|| ಗ(ಳಾ)ಳೋರುಜ(ಗ)ಂ ತಾಳುಕ ಜಿಹ್ವರೋಗಂ |
ಗಳಗ್ರಹಂ ದ್ರೋಣಿಕೆ ವಕ್ತ್ರಶೋಫಂ ||
ಉಳೂಕಪಾತಂ ಕೆಱಿಕಿಂತು(ಕೆಂದು) ವಾಹಾ |
ಕುಳಕ್ಕೆ ಪೇೞ್ದಿ ಧ್ಯಯನಂ ದ್ವಿಸಪ್ತಂ || ೩೧ ||

ಇಂತು ಚತುರ್ದಶಾಧ್ಯಾಯಂ

# ಪಂಚದಶಾಧ್ಯಾಯಂ

## ತಳರೋಗಂ

ಕಂ|| ಕಿಱುಗಲ್ಲೊಳ್ ಕೆಸಱೊಳ್ ಮೊಳೆ |
ಕೊರಡುಗಳೊಳ್ ಮುಳ್ಳೊಳಿಡುಕುಱಿಡೆಗಳೊಳಂ ಪಾ ||
ಯ್ದುಱದೆ ಕೊಳಗುಗಳ್ ಸಲೆ ಕು |
ತ್ತಿಱಿದೊಡೆಕುತ್ತಡಿಯ ನಿಡುವೊಡದು ತಳರೋಗಂ || ೧ ||

ಕ್ಷೀರಿಕೆಯಂ ಕರ್ಚುವುದಾ |
ಕ್ಷೀರಮಹೀರುಹಕಷಾಯದಿಂದಂ [ತಂದಂ] ||
ಭೋರುಹ ಲೋಧ್ರಂ ತ್ರಿಫಲೆಯ |
ನೀರೊಳ್ ಮಱ(ಘು)ಮಿಶ್ರವಾಗೆ ಪೂಸುಗೆ ಖುರಮಂ || ೨

ಅರಗುಂ ತಿಲತೈಲಂ ಸ |
ರ್ಜ್ಜರಸಂ ಶ್ರೀವತ್ಸಕಂ ಘೃತಂ ಗುಗ್ಗುಲಮುಂ ||
ಖುರಮಂ ಪೂಸುಗೆ ಬಱಿಕಾ |
ಖುರಮಂ ಮೆಟ್ಟಿಸುಗೆ ಕಾಸಿ ತಂದಿಟ್ಟಿಗೆಯಂ || ೩

ಅರಿದಾಳಂ ತುಪ್ಪಂ ಸ |
ರ್ಜ್ಜರಸಂ ಮೆಳ(ಣ)ಸರಗು ಗೇಱಿಗೊಟ್ಟೆಯುಮೊಂದಾ ||
ಗಿರೆ ಮಾಡಿ ಕಾಸಿ ಪೂಸುಗೆ |
ಖುರಮಂ ಮೆಟ್ಟಿಸುಗೆ ಕಾಸಿ ತಂದಿಟ್ಟಿಗೆಯಂ || ೪

ಅರಿದಾಳಂ ಲೋಧ್ರಂ ತಿಲ |
ಮರಿಸಿನಮಂ ತ್ರಿಫಲೆ ಗೇಱಿಗೊಟ್ಟೆಯನಿಂಬಾ ||
ಗಿರೆ ಕೂಡಿ ಕಾಸಿ ಪೂಸುಗೆ |
ಖುರಮಂ ಮೆಟ್ಟಿಸುಗೆ ಕಾಸಿ ತಂವಿಟ್ಟಿಗೆ(ಯಂ)ಯೊಳ್ || ೫

ಉಪಮಾರಹಿತಂ ಮತ್ತೊಂ |
ದುಪಾಯಮುಂಟಿಲ್ಲತೆಱದ ತಳರೋಗಂಗ ||
ಳ್ಗುಪಶಮಮಂ ಪುಟ್ಟಿಸುಗುಂ |
ತ್ರಿಫಲೆಯ ಮೆಳ್ಳೆಣ್ಣೆಯೂಡೆ ತಳರೋಗಹರಂ || ೬

(ಕೂರ್ಚರೋಗ)

ತುರಗದ ಕೂರ್ಚಸ್ಥಾನಾಂ |
ತರದೊಳಮತಿರೌದ್ರವೇದನಂ ಪುಟ್ಟೆ ಭಯಾ ||
ತುರನಾಗಿ ಕುಂದಿ ನಡುಗು |
ತ್ತಿರೆ ರೋಗಂ ಕೂರ್ಚರೋಗವೆಂದಱಿವುದದಂ || ೭

ಕಂ|| ಸರಳಂ ಕೋಷ್ಠಂ ಮಂಜ |
ಷ್ಠೆ ರಾಷ್ನೆ ಬೆಳ್ಳುಳ್ಳಿ ಸ್ಯೆಂಧವಂ ಗೋಕ್ಷೀರಂ ||
ಬೆರಸಟ್ಟು ಪೂಸೆ ಕಿಡುಗುಂ |
ತುರಗಕ್ಕಂ ಕೂರ್ಚರೋಗ(ಲಿಂಗ)ಮಭಿನವಚಂದ್ರಾ || ೮ ||

ಸಮವಾಯುಂ ಕಳೆದೊಡೆ ಸೇ |
ಕಮನತಿಶಯಮಾಗಿ ಮಾಡಿ ಕಳೆದಗದಱಿಂದಂ ||
ಶಮಂ ಮಾಡ(ಗ)ದಂದದನನು |
ಕ್ರಮದಿಂದಂ ಪೊರ್ದೆ ಬರೆಯನಿಡುವುದು ನಯದಿಂ || ೯ ||

(ಕಣ್ಣುಪುಷ್ಪಪಟಲಾದಿ)

ನಯನಾಂಬು ಪೊಣ್ಮೆ ಪಿತ್ತಾ |
ಶ್ರಯಮಕ್ಕುಂ ಪಚ್ಚೆ ಸುರಿಯೆ ನಯನಂ ಶ್ಲೇಷ್ಮಾ ||
ಶ್ರಯಮಕ್ಕುಂ ವ್ಯಥೆಯಿಂದಂ |
ನಯನಂ ಮುಚ್ಚಿಪೊರ್ಡದುವೆ ವಾತೋತ್ಥಾನಂ || ೧೦ ||

ಇಂತೀ ದೋಷತ್ರಯದಿಂ |
ದಂ ತಿಮಿರಂ ಕಾಚ ಪುಷ್ಪಪಟಲಾದಿಗಳುಂ ||
ಭ್ರಾಂತಿಲ್ಲದಕ್ಕುಮಱಿ ಕಡೆ |
ಗಂ ತುರಗವಿಲೋಚನಾದಿಯೊಳೆ ಬುಧಬಂಧೂ || ೧೧ ||

ಪರೆದು ಪಱ(ರ)ಕಲಿಸಿ ಕವಿವಾ |
ಪರೆಯಂ ತೆಗೆದಱಿದು ಕಳೆದು ಸ್ಯೆಂಧವಮಂ ತಂ ||
ದರೆದು ಪುಡಿಮಾಡಿ ತೀವಿದೊ |
ಡಱಿ ಕೆಡುಗುಂ [1]ಚಕ್ಷುರೋಗಮಿರದುಪಶಮಿಕುಂ || ೧೨ ||

ಕರ್ಪೂರಮಂ ಸ್ಯೆಂಧವಮಂ |
ಪಿಪ್ಪಲಿಯಂ ಜೇನತುಪ್ಪಮಂ ನೊರೆವಾಲೊಳ್ ||
ತುಪ್ಪಂ ನಿಲೆಯುಟ್ಟಿದ ಪದ |
ನಪ್ಪಂತೆಚ್ಚುವುದು ಚಕ್ಷುರೋಗಂ ತೀರ್ಗುಂ || ೧೩ ||

ಅಱ(ರ)ಗಣಿಲೆ ತಾಱಿ ಮಣಿಶಿಲೆ |
ಮರಿಚಂ ಮಾಗಧಮೆ ಶಂಖ ನಿಂಬಶಲಾಕೋ ||
ತ್ತರಮನಜಮೂತ್ರಮಂ ಪೊ |
ಯ್ದರೆದೆಚ್ಚುಗೆ ಚಕ್ಷುರೋಗಮಿರದುಪಶಮಿಕುಂ || ೧೪ ||

ಅರಿಪಾಳಿ ಪಟೋಲಂ ಕಿ |
ಳ್ಸೊ(ಳ್ಸಿ)ರೆ ರಕ್ತಂ ಮಂಜು ಮೊಳೆ ತಮಸ್ತಿಮಿರಂ ಪೂ ||
ವರಸೆ ತೆರೆಯೆಂಬ ಪಲವ |
ಕ್ಷಿರೋಗಮಂ ಕಳೆಗುಮಂಜನಂ ಜಗ(ನ)ಕೆ ಹಿತಂ || ೧೫ ||

[1] ವಕ್ಷರೋಗ

ಕಿವಿಬೇನೆ (ಕರ್ಣರೋಗ)

ಕಂ|| ವಾತಶ್ಲೇಷ್ಮದಿ ನತ್ಯುಪ |
ಮಾತೀತಂ ಕಿವಿಯ ಬೇನೆಯಕ್ಕುಂ ತುರಗ ||
ವ್ರಾತಕ್ಕೆ ಬಗೆಯದಿರೆ ವಿಪ |
ರೀತಂ ಬೆರಸಲದು ಕಾಡುಗುಂ ಪಲದಿವಸಂ || ೧೬ ||

ಕಟಿಯಂ ಸೋಧಿಸಿ ತಂದದ |
ರೊಳಗಲ್ಲವನಿಕ್ಕಿ ಮಾತುಲುಂಗಾಮ್ಲಮುಮಂ ||
ತಿಲತೈಲಮುಮಂ ಪೊಯ್ದಾ |
ಗಳೆ ಬೆಚ್ಚನೆಮಾಡಿ ಕಿವಿಯೊಳೆಱೆದೊಡೆ ತೀರ್ಗುಂ || ೧೭ ||

ಜನಿಯಿಸು ಗುದರಿಂ(ಗದೞಿಂ) ಮೆಯ್ಯ್ ತೊ |
ಟ್ಟನೆ ಪೊಱಮಡೆ ಕರ್ಚಿ ಬಿಸಿಯ ಪಾಲೊಳದಂ ನಿ ||
ರ್ವಿನಸದಿರೆ ಕಿವಿಯೊಳೆಣ್ಣೆಯೊ |
ಳೆನಿಸಾನುಂ ಚಿಂತೆಮಾಡಿ ಸೇಕಿಪುದದಱಿಂ || ೧೮ ||

ಅತಿಧವಳಮಪ್ಪಿನಂ ತೊಳೆ |
ಘೃತಮಂ ತಣ್ಣೀರೊಳೊರಸಿ ಸೈಂಧವಸಹಿತಂ ||
ಘೃತಮಂ ಗುದಮುಖದೊಳ್ ಪೂ |
ಸುತೆ [1]ಮಾಣ್ಗುಂ ವಾಜಿಗಳ್ಗೆ ಪಾನಭ್ರಂಶಂ || ೧೯ ||

ಅವುಂಡಿಗೆ (ಚರಣಗ್ರಂಥಿರೋಗ)

ಸೊಗಯಿಪ ಮಣಿಬಂಧಂ ತೊ |
ಟ್ಟನೆ ಕೊಳೆ ಕೋಮಳಿಕೆಗೆಟ್ಟು ಗಂಟಾದೊಡೆ ವಾ ||
ಜಿಗಳಳುಕಿನಡೆಯಲಾವುಂ(ಗಂ-ಟಿಂ) |
ಡಿಗೆಯೆಂಬುದು ಗಂಟು ಕುಂಟುಮಾಳ್ಕುಂ ಹಯಮಂ || ೧೯ ||

ಮ|| ಅರಿದಾ ಗ್ರಂಥಿಯ[2]ರಕ್ತಮಂ ಕಳೆದು ಮತ್ತೆಳ್ಳೆಣ್ಣೆಯಂ ಪೂಸಿ ವಿ |
ಸ್ತರದಿಂ ಮಾಡುಗೆ ಸೇಕಮಂ ಬಟಿಕವತ್ತಂತಲ್ಲಿ ಗೋಮೂತ್ರದಿಂ ||
ದರೆದಾನಾಗರಮಂ ಹರಿದ್ರಯುಗಮಂ ವಸ್ತ್ರಾಂತರಂಗೆಯ್ದು ವೆಂ |
ತ್ವರಿತಂ ಕಟ್ಟುಗೆ ವಾಜಿಗಳ್ಗೆ ಚರಣಗ್ರಂಥೀರುಜೋಚ್ಚಾ(ಶಾ)ಟನಂ || ೨೦ ||

ಕಂ|| ತಳಲಿಂ(ರೋ)ಗ ಕೂರ್ಚಲಿಂ(ರೋ)ಗಂ |
ಗಳವುಂಡಿಗೆ ಗಂಟುಗಳ್ಗುದಭ್ರಂಶಂ ವ್ಯಾ ||
ಕುಲಮಕ್ಷಿಕರ್ಣರೋಗಂ |
ಗಳುಮಂ ವಿರಚಿಸಿದ ಪಂಚದಶಮಾಧ್ಯಾಯಂ || ೨೧ ||

ಇಂತು ಪಂಚದಶಾಧ್ಯಾಯಂ

1 ಮಾಣ್ಕುಂ, ಟ್ಕುಂ 2 ರಕ್ತ

# ಷೋಡಶಾಧ್ಯಾಯಂ

## ಸರ್ಪವಿಷಾದಿಯ ದೋಷಂಗಳ್

ಕಂ|| ತನುಶೋಭ(ಫ)ವೇಱಿ ಗಂಟುಗ |
ಳೆನಿತಾನುಂ ತೋಱಿ ಸುರಿಯೆ ಮುಖದಿಂ ಶ್ಲೇಷ್ಮಂ ||
ಮನವಿಕ್ಕೆ ಬೇಗದಿಂ ಕಿ(ನಿ)ಡಿ |
ದಿನಿಸಾನುಂ ಸುಯ್ಯೆ ಶೋಮ ಮೊಡ(ದೆ)ದಿರೆ ಮತ್ತಂ || || ೧ ||

ಪ(ಸ)ರಿದಿರೆ ಬಾಲಂ ಸಾಲಗೆ |
ಕರಿದಾಗಿರೆ ತಿಮಿರಮಡರೆ(ಗೆ) ಚೇಷ್ಟೆಗಳೆನಿತುಂ ||
ಕರಮತಿಕುಪಿತಮನಂ ವಿಷ |
ಧರನಳುರ್ದುಂ ಕೊಂಡುದಕ್ಕು ಮೆಂದಱಿವುದದಂ || ೨ ||

ಉರಗಂ ಕೊಂಡೆಡೆಯನದಂ |
ತ್ವರಿತಂ ತೆಗೆದರಿದು ಕಳೆದು ಮೆಯ್ಯೊಳ್ ವಿಷಮಂ ||
ಪರಿಯಲ್ಕೀಯದೆ ತದ್ವಿಷ |
(ಹ)ರಮಂ ಕಟ್ಟಿಸುವುದುಪ್ಪುಮಂ ತುಪ್ಪಮುಮಂ || ೩ ||

ಬೞಿಯಂ ಕೆಸಱೊಳೆ ಮೆಯ್ಯಂ |
ಬಳಿವುದು ಮಧುಘೃತ ಸಮಾನಗುಡಸಂಯುತದಿಂ ||
ತು(ಳು)ೞಿ ಕಿಱುಕು ಸಾಲೆಯುಮನಾ |
ಗಳೆ ಕಳ್ಗೊಳ್ ಕುಡುಗೆ ಮಧುವಿಮಿಶ್ರಿತದಿಂದಂ || ೪ ||

ತಱಿದರೆದು ಸೆಳ್ಳತಿಗುಡಂ |
ಕಿಱು(ಕು)ಸಾಲೆಯ ಬೇರುಮಂ ಸವಿಸ್ತರದಿಂ ತಂ ||
ದೆಱೆದಂಬಿಲದೊಳೆ ವಾಜಿಗೆ |
ಪೆಱತೇವುದೊ [ಮರ್ದು] ಮೂಲಮಂತ್ರಮಿದೆ ವಿಷತಂತ್ರಂ || ೫ ||

ಎಮ್ಮೆಯ ಸಗಣದ ರಸದೊಳ |
ಗಿಮ್ಮಾನಂ ಘೃತಮನೆಱೆದು ಕುಡುವುದು ಮೇಣ್ ಮ ||
ತ್ತೊಮ್ಮಾನಂ ಘೃತ ಮೂ(ಮಾ)ಡುವು |
ದಿಂಮಾನಂ ಕೞಿಯೊಳರೆದು ನೀಲಿಯ ರಸಮಂ || ೬ ||

ಕಡವದ ತಿಗುಡಂ ಘೃತಮುಮ |
ನೊಡಗೂಡಿ ಹಯಕ್ಕವಿಾವುದಂತಲ್ಲದೊಡಂ ||
ಕಡುಮುಳಿದು[ಕೊಂಡ]ವಿಷಮಾ |
ಗಡೆ(ಳೆ)ಕಿಡುಗುಂ ಬೞಕ್ಕೆ ಕುಡುಗೆ ತಗ್ಗಿಯ ರಸಮಂ || ೭ ||

ಕಂ|| ಸಲೆ(ತಿಲ)ಮಧುರಮುಪ್ಪು ತಿಕ್ತಂ |
ಗಳುಮಾ ಗಂಧಂಗಳಕ್ಕುಮಂತೆಯುದ್ದಂಗು ||
ಗ್ಗುಳಕೆ ಸವಿ ನಾಲ್ಕು ಭೇದಂ |
ಗಳಕ್ಕುಮೆಂದಱಿದು ಯೋಜಿಪುದು ಗುಗ್ಗುಳಮಂ || ೨೩ ||

ಕರಿಗಳ್ಗೆ ಕುಮುದವರ್ಣಂ |
ತುರಂಗಮವ್ರಜಕೆ ಪದ್ಮರಾಗಾಭಾಸಂ ||
ನರರ್ಗ(ಳ)ಮಲಕಾಂಚನಾಕೃತಿ |
ದೊರೆಕೊಳೆ ತೆಱನಱಿದು ಯೋಜಿಪುದು ಗುಗ್ಗುಳಮಂ || ೨೪ ||

ಪಲವರ್ಷಮಾದಿಯಾಗಿರೆ |
ಪಲವುಂ ದೆವಸ ಮಳವೇಱಿಕೊಡುವುದದಂ ನಾ ||
ಲ್ವಲಮೆಯುದ್ದಿನಂ ಬಱಿ |
ಯೊಳೇೞುದಿವಸಕ್ಕಿಱಿಯೆ ಕುಡಗನುಕ್ರಮದಿಂದಂ || ೨೫ ||

ಶರದದಋತುವಿನೊಳಂ ವಿ |
ಸ್ತರಸುರತೋತ್ಸವ ವಸಂತಋತುವಿನೊಳಂ ಬೈ ||
ಗಿರುಳಿಕ್ಕುಗೆ ಗುಗ್ಗುಳಮಂ |
ಬೆರಸಿ ಪಳತ್ರಯದೊಳೆಂದನಭಿನವಚಂದ್ರಂ || ೨೬ ||

ವರುಷದೊಳಂ ಗ್ರೀಷ್ಮದೊಳಂ |
ಭರದಿಂದಂ ಕುಡುಗೆ ತುಪ್ಪದೊಳೆ ಗುಗ್ಗುಳಮಂ ||
ಗೋಮೂತ್ರಮಿಶ್ರಿತಂ ಸ |
ರ್ವಾಮಯಹರಣಂ ಶರೀರಸಂಪತ್ಕರಣಂ || ೨೮ ||

ಇಂತೀದ್ವಾದಶಮಾಸಾ |
ಭ್ಯಂತರದಾವಾವ ಋತುವಿನೊಳ್ ತೀರ್ದೊಡ ವಾ ||
ದಂ ತಡೆಯದೆ ಕುಡು ಸತ್ವರ |
ಮಂ ತಿಳಿ ಮುದದಿಂದೆ ಮುನ್ನೆ ಪೇೞ್ದೀಕ್ರಮದಿಂ || ೨೯ ||

ಈ ಗುಗ್ಗುಳಂ ರಸಾಯನ |
ಯೋಗಮಿದಂ ಕೊಟ್ಟೊಡುತ್ತರಕ್ರಿಯೆಯೊಳದಂ ||
ಬೇಗದಿನಿಕ್ಕುವುದಳಿಲೆಯ |
ನೋಗಡಿಸದೆ ಹಯಕ್ಕೆ ಚಂದಿವರ್ಮನ ಮತದಿಂ || ೩೦ ||

ಬೇವಿನ ಕಷಾಯ ದೊಳಗಣ |
[ಮಾ]ವಿನ ಮೂತ್ರಮನೆ ಸಾರಮುಣಿಸಿಲೆಗಳನೆ ತಾಂ ||
ಭಾವಿಸಿ ಕೊಂಡರೆದಿಂಬಿನೆ |
ತೀವುಗೆ ಕರ್ಬೊನ್ನ ಬಟ್ಟಲೊಳ್ ನಿಪುಣತೆಯಿಂ || ೩೧ ||

(ಹರೀತಕೀ ಕ್ರಿಯೆ)

ಕಂ|| ಅಱುನೂಱನೆಂಟುನೂಱಂ |
ನೆಱೆಸಾಸಿಱಮಣಿಲೆಯಂ ತಥಾಕ್ರಮದಿಂದಂ ||
ಕಿಱಿದುಮಱೆ ಮಧ್ಯಮೋತ್ತಮ |
ಮಱಿದಿಕ್ಕುಗೆ ಮೂಱುವತ್ಸರಂ ಬರ್ಪಿನೆಗಂ || ೩೨ ||

ಆಯ್ದು ಯ್ದು ನೆರೆಯೆ ಕುಡೆ ನೂ |
ಱುಯ್ದು ದಿನಂ ದಿವಸ ಮಳಮನು ಕ್ರಮದಿಂದಂ ಮ ||
ತ್ತಯ್ದಯ್ದು ನಿಱಿಗೆ ಘೃತಮಂ |
ಪೊಯ್ದು ಕ್ಕುವುದಣಿಲೆಯಂ ಸವಿಸ್ತರದಿಂದಂ || ೩೩ ||

ಬಾಧಿಸಿ ಕಳೆಗುಂ ಸರ್ವ |
ವ್ಯಾಧಿಗಳಂ ಶ್ಲೇಷ್ಮವಾತ ಪಿತ್ತಂಗಳುಮಂ ||
ಸಾಗಿಸಿ ಮಿಗಲೀಯದೆ ಸಂ |
ಬೋಧಿಸಿ ಕುಡುಗೀ ಹರೀತಕೀಕ್ರಿಯೆ ದಿವ್ಯಂ || ೩೪ ||

ಸಕಲ ವಿಷಹರಮನುಪಮ |
ಸಕಲ ಕ್ಷಯರೋಗ ಹರಮನೆಸೆದಿರೆ ಪೇೞ್ದಂ ||
ಸಕಲ ಬುಧೆಸ್ತುತ್ಯಮನೊ |
ಲ್ಪ ಕಳಂಕರ್ ಪೊಗೞೆ ಷೋಡಶಾಧ್ಯಾಯದೊಳಂ‡ || ೩೫ ||

ಇಂತು ಷೋಡಶಾಧ್ಯಾಯಂ

‡ಅಂತು ಶಾಲಿಹೋತ್ರ ಗ್ರಂಥ೨ ೩೦೦ ಮಂಗಲಮಹಾಶ್ರೀ. ಇನ್ನೊಂದು ಪ್ರತಿಯಲ್ಲಿ– ಅಂತು ಸಂಧಿ ೧೬ಕ್ಕಂ, ಪದ ೮೮ಲಂಕ್ಕಯಂಗಳ ಮಹಾಶ್ರೀ ಶಾಲಿಹೋತ್ರ ಗ್ರಂಥ ೨೮೮ಂ ಶ್ರೀಪೂಜ್ಯಪಾದಸ್ವಾಮಿನೇ(ಯೇ) ನಮಃ—ಎಂದಿದೆ.

# ಮುದ್ರಿತವಾದ ಬಳಿಕ ದೊರಕಿದ ಪಾಠಗಳು

| ಪುಟ | ಪಙ್ಕ್ತಿ | ಮುದ್ರಿತ ಪಾಠ | ಬೇರೆ ಪಾಠ |
|---|---|---|---|
| 4 | ೫ | ದರ್ಪಕ | ಖರ್ಪರ |
| ,, | ೯ | ಅರಿದಾಳಿ | ಅರಿಪಾಳಿ |
| | ೮ | ೨೨ನೆಯ ಕಂದವಾದ ಬಳಿಕ ಇರುವ ಕಂದ | ಮೃದುಸ್ಪೃಕ್ಕ್ವಿಣಿಯುಂ ಹನುಚ \|<br>ಕ್ರದ ನೇರ್ಪುಮುಮರ್ಕೆವೆತ್ತ ಹನುಸಂಧಿಗಳುಂ \|\|<br>ಬೆದಱದೆ ಬೆಡಂಗನಾ \|<br>ಳ್ದೊವಿದ ಚಿಬುಕಮುಮುತ್ತರೋಷ್ಠಮುಂ<br>ಕರಮುಚಿತಂ \|\| |
| ,, | ೧೧ | ನೆರೆಸೆರೆಯೆಂಬರಜಾಗಾ ? | ನರೆಯೆಂಬ ರುಜೆಗಾಗರವಾಗದ |
| 5 | ೧೪ | ಕರ್ಣಂ | ವೃತ್ತಂ\|\| ಸ್ಥೂಲಂ ಋಜುಬಾಹುಜಾನು |
| ,, | ೧೮ | ಘಟೆಯುಗಮಿಟ್ಟಂ | ಕೊಡನಂ ತಂದಿಟ್ಟ |
| ,, | ೨೫ | ಸೋಂಕದಿರೆ – ಪೆಗ್ಗತೆರಂ | ಸೋಂಕದಿರೆ ಶುಭದ ಮಪರಖ \|<br>ರಂ ಕುಷ್ಠಿಕೆ ಕೂರ್ಜೆ ಜಂಘೆ ಮುಂ ಪೇೞ್ದತೆಱಂ \|\| |
| 6 | ೧೮ | ಮೊಲೆನೋಡೆ ಕುಱಿಯ ತೆಱದಿ | ಮೊಲೆ ಕುಱಿಯಃ ಮೊಲೆಯತೆಱದಿರ್ಕೆಲ |
| 7 | ೨೨ | ದೊಡೆ ಕರ್ಕಂ | ದೊಡೆ ಕರ್ಣಂ |
| ,, | ೨೭ | ಮುಷ್ಕಾಕಪಾನಮುಮದರು | ಪರೆದಿರೆ ಮುಷ್ಕಮನಾಕ \| ರ್ಪರುಣಚ್ಛವಿ |
| 16 | ೨ | ಮೇಢ್ರಪುಷ್ಪ | ಪುಂಡ್ರಪುಷ್ಪ |

# ಪರಿಶಿಷ್ಟ

## ಮೂಡಬಿದರೆ-( ಮಹಾ ವೀರವಾಣೀವಿಲಾಸ ಜೈನಸಿದ್ಧಾಂತ ಭವನವೆಂಬ ಜೈನ ಪುಸ್ತಕಭಂಡಾರದ ಓಲೆಯುಪ್ರತಿಯ ಪಾಠ*

( ಶ್ರೀ ಲೋಕನಾಥ ಶಾಸ್ತ್ರಿಗಳ ಖಾಸಗಿ ಭಂಡಾರ)

| ಪು. ಸಂ. | ಮುದ್ರಿತ. | ಹೊಸಪಾಠ. |
|---|---|---|
| ೪—೯ | ಆರಿದಾಳ | ಸೆರೆ ರಕ್ತಂ ಮಂಜುಮೊಳೆ ತಮಸ್ತಿ ।<br>ಮಿರಂಗುಂಜರುಸೆನರೆಯೆಂಬ ರುಚಿಗಾ ॥<br>ಗರಮಾಗದ ಮಧುವಿಲೋಚನಂಗಳ್ ಶುಭದಂ ॥ ೪೨ ॥ |
| | ತೋರ್ಪೊ...ದಂತಿರೆ | ಪಿಂದೆಪಾರ್ಕಿನ ಕಡೆಯೊಳ್ ॥ ತೀವಿಸಿದಂತಿರೆ |
| ೮—೬. | ಕೊಂಗಂಜ್ವಳ...... | ಕೊಂಗನ ನೊಸಲೊಳ್ ಬೆಳ್ಪೆಳದಿಂಗಳನನುಕರಿಸಿ ತೋರ್ಪೊಡದು ಶಾರುರಗ್ಗಂ ॥ |
| ೯—೨೦ | ೧೯ನೆಯ ಕಂದವಾದ ಬಳಿಕ ಈ ಪದ್ಯ ಹೆಚ್ಚಿದೆ. | ಕೊರಲುಂ ಖುರಂಗಳುಂ ಕ ।<br>ಣ್ಣರೋಷ(ಮ)ಮುಂ ಕರಿಯವಾಗಿ ಕೇಸರಮುಂ ಮೆಯ್ಯು<br>ವಿರುವಾಲಧಿಯುಂ ಶ್ವೇತವಾದೊಡಂ ಕೊಂಚೆಪತ್ರನಭಿನವಚಂದ್ರಾ॥ |
| ೧೧—೨೦ | ಅಮಳಜಳ | ಧವಳಜಳಧರದ ಕೂರ್ಮದ ।<br>ಕುವಳಯಬಾಂಧವನ ತೈಲದನಿಮಿಷದ ಸುಧಾ॥<br>ವಲಿತ ವಿಚಿತ್ರ ಪತ್ರ। ಗ್ರಿವದಂದಮನಿನಿಸು ಬೆಳ್ಪುತೋರ್ಪೊಡೆ ಶುಭದಂ |
| ೧?—೮ | ನಯನಂ ಎಂಬ ಪದ್ಯವಾದ ಬಳಿಕ | ವೃಕಧೂಮುಭಸ್ಮ ಕರಮುಂ ।<br>ಸಕಕಾಕೋಲೂಕಚಂಡಿನಿರ್ದೀಕಾಳ ॥<br>ಪ್ರಕರದವರ್ಣಂಗಳ್ ಹಯ ।<br>ನಿಕರಕ್ಕಶುಭಂಗಳೆಂದನಭಿನವಚಂದ್ರಂ ॥ ೪೦ ॥ |
| ೧೩—೧೯ | ರುರವಿನಿತು | ಕುರವಿನಿತುಂ ವಾಜಿಗೆ ಪಾಂ ।<br>ಡರಮಾದಂ ರುಜನಿಯೆಂಬರದು ಕರಮಶುಭಂ । ೫೦ ॥ |

*ಈ ಓಲೆಪ್ರತಿಯು ಈ ಗ್ರಂಥದ ಸಂಪೂರ್ಣಮುದ್ರಣಾನಂತರ ದೊರಕಿತು. ಇದರಲ್ಲಿ 46 ತಾಳಪತ್ರಗಳಿವೆ. ಆದಿಯ ೩೮ ಪದ್ಯಗಳಿಲ್ಲ ೧ನೆಯ ಓಲೆಯ ಮೊದಲಪಙ್ಕ್ತಿಯಾದಿಯಲ್ಲಿ ೩೮ ಎಂಬ ಪದ್ಯಸಂಖ್ಯೆಯನ್ನು ಬರೆದು ನಿರಂತರವಾಗಿ ೩೯ನೆಯ ಪದ್ಯವಿದೆ. ಓಲೆಯ ಸಂಖ್ಯೆ ಮಾತ್ರ ೧ ಎಂದಿದೆ. ಈ ಪ್ರತಿಯನ್ನು ಬರೆದವನು ಆದಿಯ ೩೮ ಪದ್ಯಗಳನ್ನು ಬರೆದಿದ್ದು ಈಗ್ರಂಥವನ್ನು ಪಡೆದವರಿಗೆ ಈ ಭಾಗವು ದೊರಕದೆಹೋದುದರಿಂದ ಅವರು ಪತ್ರ ಸಂಖ್ಯೆಯನ್ನು ೧ ಎಂದು ಭಾವಿಸಿ ಪತ್ರಸಂಖ್ಯೆಯನ್ನು ಗುರ್ತಿಸಿರಬಹುದೆಂದು ಊಹಿಸಬಹುದು ಅಲ್ಲದೆ ಗ್ರಂಥ ಲೇಖಕನಿಗೇ ಈ ಭಾಗವು ದೊರಕದಿದ್ದರೆ ೩೮ ಎಂಬಸಂಖ್ಯೆಯನ್ನು ಹಾಕದೆ ೧ ಎಂದೇ ಲೆಕ್ಕಹಾಕುತ್ತಿದ್ದನು. ಆಹುದರಿಂದ ಲೇಖಕನಿಗೂ ಈ ಭಾಗ ದೊರಕದಿದ್ದು ಮೂಲಪ್ರತಿಯಂತೆ ಗ್ರಂಥಸಂಖ್ಯೆಯನ್ನುಹಾಕಿರಬಹುದೆಂದಾದರೂ ಊಹಿಸಬಹುದು, ೨೮ನೆಯ ಕೊನೆಯಲ್ಲಿರುವ ॥೩೮॥ ತುರಗದ ಹೃದಯದೊಳಿತ್ತಿದ—ಎಂಬುದು ೩೫ನೆಯ ಕಂದದ ಆದಿಭಾಗ, ಇದರೊಡನೆ ಮುಂದಣ ೨೫ ಓಲೆಯಲ್ಲಿರುವ ತುರುಂಬಿರ್ದಪದಕ್ಕೆ...ನಿಜೋತ್ಸಾಹಮಂ ॥೩೫॥ ಎಂಬ ಆರನೆ ಅಧ್ಯಾಯದ ೯ನೆಯ ವೃತ್ತದ ಕೊನೆಯ ಭಾಗ ಸೇರಿ ೩೫ ಪದ್ಯಸಂಖ್ಯೆಯಿದೆ, ಕುದಿರೆ ಎಂಬ ಮುಂದಣ ಪದ್ಯಕ್ಕೆ ಸಂಖ್ಯೆಯಿಲ್ಲ. ಶ್ರೀಯುಂಮೆರೆ ಎಂಬ ಮುಂದಣ ಪದ್ಯಕ್ಕೆ ಮಾತ್ರ್ಯ ೭೦ ಎಂಬ ಸರಿಯಾದ ಸಂಖ್ಯೆಇದೆ. ಇದನ್ನು ನೋಡಿದರೆ ಲೇಖಕನಿಗೆ ಈ ಗ್ರಂಥ ಭಾಗವು ದೊರಕದೆ ಪ್ರಮಾದಪಟ್ಟಿರುವಂತೆ ತೋರುವುದು. ಇದರಲ್ಲಿ ಗ್ರಂಥಪಾತಹೆಚ್ಚಾಗಿದ್ದರೂ ಈ ಮುದ್ರಣದಲ್ಲಿರುವ ಹಲವು ಲೋಪದೋಷಗಳನ್ನು ಸರಿಪಡಿಸಲು ಅನುಕೂಲ ಪಾಠಗಳುಂಟು. ಹಲವು ಪದ್ಯಗಳು ಅಧಿಕವಾಗಿಯೂ ದೊರೆಕಿರುವುದರಿಂದ ಅವನ್ನೂ ಇಲ್ಲಿಕೊಟ್ಟಿದೆ.

| | | |
|---|---|---|
| ೧೫-೮ | ೫ನೆಯ ಪದ್ಯವಾದ ಮೇಲೆ ಈ ಪದ್ಯವಿದೆ | ಬೇರಂ ಪುಂಗಳಕ್ಕೈ(ಖ್ಯೈ)ರಜಂಗನಳಗಂ ಜಂಭಂ(ಕರಂ)ಕತ್ತಳಂ।<br>ಸಾರಂಗಂ ಧವಳಾಂಗ ಮುಂಜತಿಲಕಂ ನೀಲಂ ಲಸತ್ಸಾಹಳಂ ॥<br>ಘೋರಂ ಕೊಂಗನೆ ಕಾಲಬೊಲ್ಲಕಜೆವಟ್ಟೆಂಮಪ್ಪ? ವರ್ಣಂಗಳುಂ।<br>ಸಾರಾಯಂ ವಳಯಾಂಘ್ರಿ ಬಾಲಮಿವು ಕಪ್ಪಾದಂದು ಸತ್ವಾಧಿಕಂ ॥ |
| ''-೨೦ | ೬೨ನೆಯ ಪದ್ಯವಾದ ಬಳಿಕ | ಸ್ತನಿ ಶೃಂಗಿ ದ್ವಿಖುರಂ ತ್ರಿಕರ್ಣತಳಹೀನಂ ಹಿಳ್ಳಿನೇಕಾಂಡದು ।<br>ರ್ಮನಸಂ ನಾಸಿಕಭಗ್ನ ಕಾಗೆ ಹುಲಿಬೆಕ್ಕುಂ ಗರ್ದಭಂ ಗೂಗೆ ಪ ॥<br>ರ್ದು ನಿಶಾಭಂ ವೃಷಭೂಮವೆಂಬಿನಿತುವರ್ಣಂ ತ್ಯಾಜ್ಯಮೇಂಸಂ<br>ದೆಯಂ ॥<br>(ಈ ಪದ್ಯ ಪೂರ್ಣವಾಗಿಲ್ಲ) |
| ೧೬-೨ | ಗಂಧಹೇಷಿತ | ಗಂಧಹೇಷಿತಸ್ವನಭವಿ । ಭ್ರಾಜಿತ |
| ೧೯-೧೮ | ರೆವದ | ರಥದ, |
| ,,-೨೮ | ತನುಚ್ಛಿನ್ನ | ತನುಚ್ಛಿನ್ನ(ಭಿನ್ನ)ಘೋರಕಠೋರ ।<br>ಸ್ವನಮಿವು ಕರ್ಣಕಠೋರ ।<br>ಸ್ವನಮಿವು ಕರಮಶುಭಸಹಿತಮಿವು ಶುಭರಹಿತಂ ॥ ೧೯ ॥ |
| ೨೦-೬ | ಶ್ರೇಷ್ಠ ಎಂಬ ಪದ್ಯವಾದ ಬಳಿಕ ಈ ಪದ್ಯಗಳಿವೆ | ಶೌಚಂ ಜ್ಞಾನಂಕ್ಷಮೆ ಸ ।<br>ತ್ಯಾಚಾರಂ ಬ್ರಹ್ಮಸತ್ವನೆಂಬುದು ಮತ್ತಂ ॥<br>ಸೌಚಿತ್ತ ಸುಶಿಕ್ಷಾಗ್ರಹ ।<br>ಣಾಚರಿತಂ ವಿಮಲಮತಿಹಯಂ ಮುನಿಸತ್ವಂ ॥ ೩೩<br><br>ತೇಜೋವಿಭವಪರಾಕ್ರಮ ।<br>ರಾಜಿತಹಯಸಿಂದ್ರಸತ್ವಮೆಂಬುದು ಮತ್ತಂ ॥<br>ವಾಜಿಸಮುಸತ್ವನೆನಿಸಿ ವಿ ।<br>ರಾಜಿಸುಗುಂ ದ್ವೇಷರಾಗ ವಿರಹಿತಗುಣದಿಂ ॥ |
| ,,-,, | | ಕೋಪ ಪ್ರಸಾದ ಸೌಖ್ಯ ।<br>ವ್ಯಾಪಾರೋದಾರಸತ್ವನಮಕಾ? ರುಚಿರಂ ॥<br>ವ್ಯಾಪಿತಶೌಚಂ ಜಲಕೇ ।<br>ಳೀಪರನತಿಶೌರ್ಯನಾಗೆ ವಾರುಣಸತ್ವಂ ॥ ॥ ೩೫ ॥<br><br>ಕ್ರೂರಂ ಬಹ್ವಾಶಿ ನಿಶೋ ।<br>ದಾರರವಂ ರೌದ್ರರೂಪಿ ರಾಕ್ಷಸಸತ್ವಂ ॥<br>ಭೀರುವ ರಾಜಿವಿರಾದೆವಿ? ।<br>ಕಾರಿಯೆನಿಪ್ಪುದು ಪಿಶಾಚಸತ್ವದ ತುರಗಂ ॥ ೩೬ ॥<br><br>ಸಂಚಿತಮುಳಿಯದು ಧುರ ।<br>ಸಂಚಿತ ಸಂಸಾಗತ ಸತ್ವಮೆಂಬುದು ಕೋ ॥<br>ಪಾಂಚಿತದಂತಾಸನ ಪ್ರಿಯಗುಣಮುಂ ನೀ ।<br>ಚಂ ಭ್ರಷ್ಟಂ? ತುರಂಗಮಂ ಪಿತೃಸತ್ವಂ ॥ ೩೭ ॥ |
| ೨೧-೫ | ಪರಿಸುಂ | ಪರಿಗುಂ ಧನುಶ್ಶತಾವಳಿಯಂ ಮ ।<br>ತ್ತದನಂತೆ ಮಗುಳ್ದು ಮಿಗೆ ಗತಿ।<br>ಯಿನತ್ಯುತ್ತಮಜವದ |

,,–೧೬ ಶರದಿಂ ಎಂಬ ಪದ್ಯವಾದ ಬಳಿಕ

ಪಗಲೊಳ್ ದಶಯೋಜನಮೆ
ಯ್ದುಗುಮುತ್ತಮನೆಂಟನೆಯ್ದುಗುಂ ಮಧ್ಯಮಾಜಿ ॥
ಯ್ದುಗುಮಧಮವಿಂತಿದು(ಂಶಾಂ) ಜಗತ್ಪ್ರಸಿದ್ಧಂ ಹಯಾಗಮಪ್ರತಿ
ಬದ್ಧಂ ॥

೨೨–೪ ನಡೆಪಾಗಿ — ನಡರ್ವನಿಙು

ನತ್ರಾಣ — ನುತ್ರಾಸಿ

ಮನ್ನ — ಮಂದ

೨೩–೧೦ ನೀಳದೊಳ್ — ನಿಗಾ(ಗ)ಳದೊಳ್

೨೪–೧ ಈ ಪದ್ಯಗಳು ಹೆಚ್ಚಾಗಿವೆ

[ಮಂ।
ನಿಂದಿರಿಸಲ್ಕದುಂ ತುರಗನೊ(ದೊ)ಳ್ ಪರಿವರ್ತನೆ ತೋಱಿ ಬಾಲ
ಸಂದಿಸಿ ಬೀಸಿ ತನ್ನಬಲದಂಗಮನೀಕ್ಷಿಸೆ ಕಂಪಿತಾಂಗಡಿಂ ಭೋ ॥
ರೆಂದುಲಿದಾಸ್ಯದಿಂದುರವಮುಟ್ಟೆ ಖುರಾಗ್ರದೆ ಕೆತ್ತೆ ಧಾತ್ರಿಯಂ।
ಸಂದೆಹಬೇಡ ಲಾಭಕೊಡುಗಾ ಹಯಮಾಗೆ ತದೀಯಭಾವದಿಂ ॥

ಗ್ರಾಹಕಬಂದು ನೋಡಲೆಡದಂಗಮನೀಕ್ಷಿಸೆ ಕಂಪಿತಾಂಗದಿಂ।
ದೇಹಮನೆಯ್ದೆಕಂ(ಠ)ಟಣಿಸೆ ಕೋ(ಪ)ಲ್ಗಳಹಂಗಲಿಸುತ್ತೆ
ಕಚ್ಚುತುಂ॥
ಮೋಹಳಮಾನದಿಂ ಮುಸುಡ ತೂಗುತುಮುಂದನಿಹೀನನಾಗಿ ತೋ
ರ್ಪಾಹಯಗೊಂಡನಾವನವಗರ್ಥವಿನಾಶ (ಸ)ಮನುಂಟುಮಾಡು
ಗುಂ ॥

,,–೨೦ ನೊಸಲೊಳ್ ಎಂಬ ಪದ್ಯವಾದ ಬಳಿಕ

ನೊಸಲಾವರ್ತಮದೊಂದು ಮುತ್ತಮ ಮೆರಟಿಲ್ ತೋಱಿಲ್ ಜಯಂ
ಪಟ್ಟದಂ।
ತೆಸೆಯಲ್ ಮೂಱು ಶುಭಾವಹಂ ನಿಱಿಸಿದಂತಾವರ್ತನಾಲ್ಕಾಗಿ ರಂ॥
ಜಿಸೆ ನಿಶ್ರೇಣಿಕಮುದ್ಭವಂ ನೆಗೞ್ಗಾಸಂತೋಷಮಂ ಕಂದದೊಳ್
ಪ್ರಸವಂಗೆಯ್ದಿರಲಾತುರಂಗಮದು ದೀರ್ಘಾಯುಷ್ಯದಿಂ ಬಾೞ್ಗುಗುಂ॥

ಪಟ್ಟಂಗಟ್ಟಿದವೋಲೊ।
ಬೊರ್ಟೆಸದಿರ್ದೊಡೆ ಲಲಾಟದೊಳ್ ಮೂಱಿಡೆಯೊಳ್।
ಪುಟ್ಟಿದ ಸುೞಿ ಶುಭದಂಗಳ್।
ನೆಟ್ಟನೆ ನೇತ್ರಾಳಿ(ಣಿ)ಯೆಂಬ ಪೆಸರಂ ಪಡೆಗುಂ ॥ ೯ ॥

ತುರಗಂಗಳ್ಗೆ ಲಲಾಟಾಂ।
ತರದೊಳ್ ಕಂಕರಿಸಿ ನೀಳದೊಳ್ಸುೞಿ ಮೂಱು ॥
ಗಿರೆ ನಿಶ್ರೇಣಿಕಮೆಂಬುದು।
ಪುರಾಣದ್ರುಸಂ ಹಯಾಧಿಪಂ ಗುರು ಕೃಷ್ಣಂ ॥ ೧೦ ॥

೨೬–೧೨ ರೋಮರಾಜಿ — ರೋಮಜಾತದಿ

,,–೧೩ ಹನುಮಧ್ಯದೆ — ಹನುಮನ್ಯಗಳಾಕಕ್ಷ

,,–೨೭ ತದ್ದಳಮಧ್ಯ — ತದ್ಗಳಮಧ್ಯ—ತುದಿಯೊಳಧಿಪನಂ

೨೭–೨೪ ಸೇವಿತ — ಸೋವತಮಕ್ಕು

೨೯–೯ ಮೊಳೆಯಂಕುರ — ಮೊಳೆಯುಂಖುರ

| | | | |
|---|---|---|---|
| ,,–೧೫ | | ತಂದಿಟ್ಟಿಂ | ತಂದಿಟ್ಟಿಂತಿರ್ಪೊಡಮಣಿ ।<br>ಮೊಂದುಂ ಪುಟ್ಟಿದೊಡಮಶುಭಂ |
| ,,–೧೭ | | ಒಂದೊಂದು — | ಒಂದುಪಿರಿದೊಂದುಕಿಱಿದಾ । ದಂದ ಶುಭಂ |
| ,,–೨೦ | ದಿನಜಾ | ದಿನಜಾತಕವಿಕೃತ ಗಾತ್ರ ।<br>ಸ್ವನನಾಸಾಭಗ್ನಕುಬ್ಜ ಪಕ್ಷಿಸ್ಥಕದು ॥<br>ರ್ಮನದುಷ್ಟ(ಷ್ಟ)ಜಲವಿಮೆತಸ? ।<br>ಮಿನಿತು ಮನಾಳಲ್ಕೆ ವೇಡ ಶುಕರವಿಲಾಸಾ ॥ ೪೭ ॥ | |
| ,,–೨೫ | ಹೀನಾಧಿಕನುರ | ಹೇತುಧಿಕನುಂ ಸ್ತನಿಯುಂ ತ್ರಿಕರ್ಣಿಯುಂ ದ್ವಿಮುಖನುಮಂ ।<br>ಧಕದಿಶಮುಷ್ಕಸಮಂ ಪೋ ।<br>ಪಕನುಂ ಶೃಂಗಿಯುಮದಾಗೆ ಕುಲನಾಶಕರಂ ॥ ೪೮ ॥ | |
| ,,–೩೧ | ಕಾಕಮುಖ | ಕಾಕಮುಖನುಂ ಕರಾಳಿಯು ।<br>ಮಾಕಸ್ಮಿಕ ಶೋಕ ದುಃಖನುಂ ಮರಣಕರಂ ॥ ೪೯ ॥ | |
| ೩೦–೧೦ | ಜಯಕರಂ | ಜಯಕರಂ ಶಶಿ ವಿದ್ಯು ॥ ಚ್ಛಾಯ ಪ್ರಭೆಸಹಿತ(ಹಸಿತ) | |
| ,,–೨೭ | ಮಿಱ ಂನರ | ಮೇಚ್ಛ್ ತ । ನ್ನರಸನ | |
| ೩೧–೩ | ಮಾಡುಗುಮಪಾರ | ನಾಡೆಯುಮಪಾರ್ | |
| ,,–೪ | ಈ ಪದ್ಯ ಹೆಚ್ಚಾಗಿದೆ | ಪಡುವ ಮೊಗಮಿರ್ದು ನೇಸರ್ ।<br>ಪಡುವಾಗಳ್ ಕಿಳಿರೆ ಸಂಜೆಯೊಳ್ ಹರಿ ಮೊಱಗುಂ ॥<br>ಸಿಡಿಲುಂ ಮಿಂಚುಂ ಬೆರಸಾ ।<br>ಗಡೆ ಸಲೆ ಮುಱಿ ಕೊಳ್ಗುಮೆಂದನಭಿನವಚಂದ್ರಂ ॥ ೫೮ ॥ | |
| ,,–೧೨ | ಬಡಗ ಎಂಬ ಪದ್ಯವಾದ ಬಳಿಕ | ಆನನಮನೆತ್ತಿ ಹಯಮಿಾ ।<br>ಸಾ(ಶಾ)ನಮನೀಕ್ಷಿಸಿ ನಿಶಾಂತದೊಳ್ ಕಿಳಿರೆ ನಿ ॥<br>ಜನಾ? ಶೋದ್ಭವಮಂ ರಿಪುಸಂ ।<br>ತಾನಕ್ಷಯಮಂ ಹಯಸ್ವನಂ ಪ್ರಕಟಿಸುಗುಂ ॥ ೬೦ ॥ | |
| ,,–೧೫ | ಕೆದಱಿಬಾಲ | ಕಿಳಿರ ತುರಂಗಂ ।<br>ದಿನಕರನಂ ನೋಡಿ ನಾಡೆ ಭಯಮಂ ಮಾೞ್ಕುಂ ೬೨ ॥<br>ಇನನಂ ಮೇಚ್ ಪೂರ್ಣಾಹ್ನದೊ ।<br>ಳನಲದಿಶಾಂತರಮನೀಕ್ಷಿಸುತ್ತುಂ ಹರಿ ದು ॥<br>ರ್ಮನನಾಗಿ ಕೆದಱಿ ಬಾಲಮ ।<br>ನನವರತಂ ಕಿಳಿರೆ ಪತಿಗೆ ಭಯಮಂ ಮಾೞ್ಕುಂ ॥ ೬೩ ॥ | |
| ,,–೨೭ | ತ್ತೆಮಿಗೆ...... ಯದಿಂ | ತ್ತುಮಿರೆ ಮಾೞ್ಕುಂ...... ಯಮಂ ॥ ೬೫ ॥ | |
| ೩೨–೬ | ನೆರಡುಕಾ | ನೆಡದಕಾ......... ನಿಲೆತಳ್ವಿಲ್ಲದೆ | |
| ೩.–=೩ | ಮುತ್ತದುತಾಂ | ಮುತ್ತಪರಾಂತರದೊಳ್ | |
| ,,–೬ | ಪತಿಮುಂತಿರಿ | ಪತಿಬೆನ್ನೊ । ಳುರಿ | |

| | | |
|---|---|---|
| ,,-೧೬ | ಉರಿಯೆ ಎಂಬ ಪದ್ಯವಾದ ಮೇಲೆ | ತುರಗದ ವಾಳಾದಾನದೊ ।<br>ಳುರಿ ನೆಗೆದೊಡೆ ಚೋದ್ಯಮಾಗಿ ಮಱಿಯಂ ವಾ ಲೋ ॥<br>ತ್ಕರಮುರಿಯೆ ಜಲಾನಲಚೋ ।<br>ದಾರಿಭಯಮನದು ಪಿರಿದುಮನಾಗಿಸಲಕ್ಕುಂ ॥ ೭೭ ॥ |
| ೩೪-೧ | ಮೇಣ್ ಕಣ್ಗಳ | ಮೇಣುಲ್ಕಂಗಳೆ |
| ,,-೫ | ಉರಿಯುನಯನಾ | ಸುರಿಯೆ ನಯನಾಂಬುವದನಮನೊರಸು |
| -೧೦ | ನಡೆವಭಟಂ | ಕೆ ನಡೆವಲ್ಲಿ ಭುಜಂ ।<br>ಗಮಮಾರ್ಗಾಕೃತಿಯಿಂ ಭಿನ್ನಮನಂಪಡಿಮೂತ್ರ |
| ೩೫-೭ | ದಮೊಗದವುಲ್ಕಾ | ದಮಾಗೆಜಮೋತ್ಕರಡಿಂದಂ |
| ೩೬-೭ | ಗಿರೆಸವಮಾಗು | ಗೆಧವಳಮಾಗು |
| ,,-೨೮ | ಪ್ರಥಮದವ | ಪ್ರಥಮದಶ |
| ೩೭-೨ | ಭಂಗಂಸಂದಂಶ | ಬರೆಗಂ ಸಂದಂಶಮಾ ಕಿಶೋರದಂಗಾಂ ॥ |
| ೩೮-೩ | ಪ್ರುವತನು | ಪ್ರುವತನುಸಂಗ್ರಾಸಪರಂ । |
| ,,-೧೬ | ನಭಂದೊರೆದೆಂತುಱ | ನಭಂ ಬಿರಿವಿನೆಗಂ ಕಿಳಿರುತಿರ್ಪೊಡಂ |
| ,,-೨೫ | ಪ್ರಭರೇಖಾ ಪ್ರಾಯಕ್ಕೆ | ಪ್ರಭುರೇಖಾ..........ವೀರ್ಯಕ್ಕೆ ಪೇೞ್ದ ದ |
| ೩೯-೧೧ | ಷ್ಯನಳಂ ಕರಂ | ಷ್ಯಾಂತರಂಗಳಂ |
| ೪೦-೬ | [ಮತ್ತಾ] | ನೀಳ್ದ |
| ,,-೨೦ | ರಾಜಶೂಲೆಗೆ | ಶೂಲೆಯಿಂದಂ ಕಿಡುಗುಂ । |
| ೪೩-೨೬ | [ಜಯವನಿತಾ] | ಜಯಾಂಗನಾವರಣಂ ಶ್ರೀವನರಾ(ಸುಧಾ)ಧಿಪತ್ಯಜನಪದಫಲಭೋಗಿ |
| ೪೪-೨ | ಪೋಲುತ್ತಿರೆ | ಪೋಲ್ತಿಂಬಾಗಿರೆ |
| ,,-೫ | ನದನೇಱಲುಱದೊಳ್ ಮುಳ್ಪದನರಿತ | ನದನೇಱಿ ಧುರದೊಳ್...ಮಾೞ್ಕುಂ ಧರೆಯಂಪಲ |
| ,,-೧೩ | | ಎಡೆವಱಿದೊಡಮಡಗಿರ್ದೊಡ ।<br>ವೊಡೆದೊಡಮತಿರೂಕ್ಷ[ಮಾಗಿರಲ್ಕ ಶುಭಂಗಳ್] ॥<br>ಕಡುನೇರಿದುವುಂ ನುಣ್ಪುಂ ।<br>ಪಡೆದಾಯುಃವಿನೆಲ್ಲ ರೇಖೆಯುಂ ಶುಭದಂಗಳ್ ॥ ೭೧ ॥ |
| -೧೭ | ಇದುಚಂದ್ರ | ಇದು ಚಂದ್ರಭಟ್ಟನಿರ್ಮಿತ । ವಿದಿತಾಯುಜ್ಞಾನದೊಳಗೆ ರೇಖಾ<br>ಣದ ಮೊದಲಮೂವತ್ತೆರಡ । [ನಿರ್ಯಾ<br>ಬ್ದದ ಸಂಖ್ಯಾಧ್ಯಾಯಪಂಚಮಂ ಪಿರಿದಕ್ಕುಂ ॥ ೭೧ ॥ |

| | | |
|---|---|---|
| ೪೫-೧ | | ಪಸ್ಯಾಧ್ಯಾಯಂ |
| | | ಮೊದಲೊಳ್ ರೇಖಾನಿರ್ಯಾ ।<br>ಣದ ತೇಜನಂ ನೋಡಿಬಗೆದು ಭಾವಿಸಿ ಮತ್ತಂ ॥<br>ಕುದಿರೆಗೆ ಶರೀರದಿಂ ಪೇ<br>ಳ್ವುದು ಮೂವತ್ತೆರಡುಬರಿಸದಾಯುವ ಪವಣಂ ॥ |
| | | ದುರ್ಗಂಧ ನಾಭಿಯಿಂದಂ ।<br>ದುರ್ಗಂಧಂ ನೆಲ್ಪರ್ಪನೆಲ್ಲ ? ತಾಳುಗೆಯಿಂದಂ ।<br>ದುರ್ಗಂಧರಶನದಿಂದಂ ।<br>ನಿರ್ಗುಣಿ ಮಱು ಕಳೆಯದೊಂದು ಸಂವತ್ಸರಮಂ ॥ |
| | | ತಾಳುಗೆ ನಾಲಗೆಯಿಂ ಪ ।<br>ಲ್ಲೊಳೆಯಿನೋಷ್ಠಂಗಳಕ್ಷಿ ವರ್ತಂಗಳ ಕ ॥<br>ಜ್ಞಾಲಿಗಳಂಮುಚ್ಚದೊಡಂ ವಿಲಯಾಶ್ವಂದ್ವಿತೀಯವರ್ಷಂ ಬಾಜ್ಝಂ<br>ನಳಿಯದ ಕುಷ್ಠಿಕೆ ದೊಡ್ಡಿದ ।<br>ವೊಳಕಾಲ್ ಸನಾಕ್ಷಿ ರೂಢಿದುರ್ಗಂಧಂಗಳ್ ॥<br>ಕೊಳೆನಾರ್ಪೊಡೆ ಕೀಳುಂಕಾ ।<br>ಲ್ಕೊಳೆಯದ ಮಱಿಯರಿದು ಮೂಱು ಸಂವತ್ಸರಮಂ ॥ ೪ ॥ |
| | | ಸವನಾದತಾಲುಗೆ ಮೂತ್ರ ।<br>ಮುವಧಿಕಮುಮಲ್ಪಮಪ್ಪೊಡಂ ನೊಸಲಸಿದಾ ॥<br>ಗುವೊಡಮದು ಕಳೆಯ........... |
| ,,-೨೬ | ಪದಪೆಯು | ಪೇಡಿಯುಮಪ್ಪಾ |
| ೪೬-೩ | ಲಂಡನಾತಿ | ಲಂಡಪಾತಿಯಪ್ಪಾಕುದಿರೆ ಗತಪ್ರಾಣನೇಱುವರ್ಷದೊಳಕ್ಕುಂ |
| -೧೦ | ಮಾಗಿರ್ಕು | ಮಾಗಿರ್ಕುರಪ್ರಪಾನದಾವರ್ತಂ ಸಂದೆಯಮಿಲ್ಲತಿದೀರ್ಘಂ |
| ೪೭-೫ | ಪಿರಿಯೆಲು | ಪಿರಿಯವು ಮೇಢ್ರಂ ಗುದಂಕಾ |
| ೪೯-೨೪ | ೩ಳನೆಯ ಪದ್ಯವಾದ ಬಳಿಕ | ತುರಗದ ಹೃದಯದೊಳೊತ್ತಿದ(ಕ) ತುಱುಂಬಿರ್ದ ಪದಕೆ - ಎಂಬ<br>ಅ7. ಪ69ರ ಭಾಗ ನಿರಂತರವಾಗಿದೆ(ಇಲ್ಲಿ ಗ್ರಂಥಪಾತಅಧಿಕವಾಗಿದೆ) |
| ೬೯-೨೨ | ಬಗೆಯಂ ಸೇಯಲ್ | ಪಗೆಯಂ ಸಾಯಲ್ |
| ೭೦-೧೦ | ಗಜ | ಗಜಘಟೆಧಾತ್ರಿ(ಪತ್ತಿ)ಯೊಳ್ ತುರಗಂಗಳ್ ॥ |
| ,,-೧೪ | ಶೇಷಿಯ | ಲ್ಪೆಸಿಯೆ ಕರ್ಕಟಿಕವಾಣಿ ತುರಗದ ಮೆಯ್ಯುಂ ॥<br>ದೂಷಿಸದಂತರಿಸಿನಮಂ |
| ೭೧-೧ | ಕದಡಿ | ಕುದಿವುದು ಪಟಿತುದು ಪ ।<br>ಪ್ಪುದು ಬೆಟ್ಟಿತು ಪಲವು |
| ೭೨-೨ | ಗುಪ್ಪೆಮರಿಚ | ಗುಪ್ಪೆಮರಿಚಗಳಿನೊಪ್ಪಲ್ ವಿಶಾಲಾಂತರದೊಳ್ ॥<br>(ಎಂದು ಅ. ೮ ಪ. ೨ರ ಭಾಗದೊಡನೆ ನಿರಂತರ, ಗ್ರಂಥಪಾತ) |
| ೭೬-೨೧ | ಜಯಜಱು | ಜಯದನುಜಕುಲಕ್ಷಯಕರ । |

| | |
|---|---|
| ,,-೨೫ ಜಯಜಯತು | ಜಯತು ಮಮಶತ್ರುಪಕ್ಷ—ಜಯದಖಿಳರಾಜ್ಯ |
| ೭೮-೪ ೧ ಪದ್ಯವಾದ ಬಳಿಕ | ಕುದಿರೆಗಳ ಪ್ರದೇಶಮಂ ನಾಮಮನಱಿಯದವರ್ಗೆ ಶಸ್ತ್ರಕರ್ಮವಗ್ನಿ<br>ಕರ್ಮ ಪೂದಕರ್ಮಬಂಧನಸ್ಥಾಪನ ಮೊದಲಾಗೊಡೆಯ ಕ್ರಿಯೆ<br>ಗಳಂ ಮಾಡಲ್ಬಾರದಪ್ಪುದರಿಂ ಪ್ರದೇಶನಾಮಮಂತಿಳಿಯಪೇಳ್ವೆಂ<br>ಇದಾದ ಬಳಿಕ ಪ್ರದೇಶನಾಮವನ್ನು ತಿಳಿಸುವ ಗದ್ಯವಿದೆ |
| ೯೦-೧ ಆಚಾರ್ಯಂಶಿಷ್ಯ | ಈ ಪದ್ಯದಿಂದ ಹನ್ನೊಂದನೆಯಧ್ಯಾಯದ ಪದ್ಯ ೭೮ ವರೆಗೆ ಗ್ರಂಥ<br>ಪಾತ(ನಿರಂತರ) |
| ೯೭-೧೯ (ಹ)ವರಿಸಿ | ವರಿಸಿದೊಡಿಂಬಕ್ಕುಂ ಮನೆ । |
| ೯೮-೩ ಹನಮೆ | ಹನಮೆಂಬುದು ರುಜೆ ತುರಗ । |
| ೯೯-೧೦ ಪರಿಭವಿ | ಪರಿವಬಸಿರ್ಕಟ್ಟೆ |
| ೧೦೦-೧೧ | ನಿರುತಕರಂಜಂ ಕಱಿಯೊಳ ।<br>ಗರೆದಿಕ್ಕುಗೆ ವಜ್ರಕೀಟನಿರ್ದಾಟನಮುಂ ॥ ೪೧ ॥<br>ಅರಗುಕೊಡಸಿಗೆಯ ಬೀಜಂ ।<br>ಸುರದಾರುವಿಳಂಗವಿಂಗಿವೆಲ್ಲಮನೊಂದಾ ॥<br>ಗಿರೆ ಕೂಡಿ ಪಿಂಡಮಿಕ್ಕುಗೆ ।<br>ಸುರೆಯುಸಮೇತಂ ತುರಂಗಮಕ್ರಿಮಿಹರಣಂ ॥ ೪೨ ॥ |
| ,,-೧೫ ಪರಿಹರಿ | ಕೀಸುವುದು ವಾ ।<br>ಜಿಗೆ ಹಿತಮಿದು ಕೀಟಕಾಪಹರಣಂ ಕರಣಂ ॥ |
| ೧೦೨-೧೭ ಬಜೆಯುಂ | ಬಜೆಯಿಂಗಣಲೆ ವಿಳಂಗಂ । |
| ೧೦೩-೧೨ ದಂಗೊಳ್ವಮ | ಪದಂಗಳೊಳವು ಬಗೆದ ಬೇಗದೊಳ್ ಘಸಣಿಯವರ್ ॥ |
| ೧೦೭-೨೭ ಸೋರುತಿರ್ಪ | ಸೋರುತಿರ್ಪ ಪುಗುಟ್ಟಿಳ್ ವಿಸರ್ಪಂ ಪಿಚ್ಚೆ । |
| ೧೦೮-೧೨-೨೬ನೇ ಪದ್ಯವಾದನೋಲೆ | ತುರಗದ ಪುಣ್ಣೊಳ್ ಕ್ರಿಮಿ ತೀ ।<br>ವಿರಲೇಲಕ್ಕಿಯನೆ ಸುಣ್ಣಮಂ ಸಮನಾಗಿಕ್ಕುಗೆ ಸಂ ॥<br>ಹರಿಕುಂ ಮತ್ತವ್ರಾಣಂತಿವು ಗುಣಮಯ ? ಯೆರಡುಭಾಗಸುಣ್ಣಂ<br>ಭಾವಂ ॥ ೨೬ ॥ |
| ೧೦೯-೨೭ ಕೊಪ್ಪುಸಿತ | ಕೊಟ್ಟುಸಿತಸಹಿತವಲಸದೆ |
| ೧೧೦-೭ ಬೆರಸಿಮನೋ | ಬೆರಸಿಕುಡೆ ಕಲಸಿ ಮನೋ ।<br>ಹರಮಾಗಿರೆಪೆಸರ |
| ೧೧೧-೧೫ ಪಡೆಕಕ್ಕೆಯಂ | ಪೆಡೆಗಳ್ಳಿಯಂ |
| ೧೧೬- ಎರಡುಂ | ಉರದ ವಿಷಾಣದ ನಡು ಬಾ ।<br>ತಿರೆ ದ್ರೋಣಿಕಮೆನಿಪ್ಪುದಕ್ಕುಂ ರುಜೆ ಮತ್ತಂ ॥<br>ತರುಣಮೃದು |
| ,,-೧೬ ಮಿತ್ರನವಂತಂದು | ಮಿತ್ರನ ಮತದಿಂದೆ ಪೂಸೆ |

| | | |
|---|---|---|
| ,,-೨೨ | ಪೃಣ್ಣಳ್ ಮೂಡು | ಪೃಗುಟ್ಟಳ್ ಮೂಡು |
| ೧೧೬-೧೫ | ಮಾರ್ದನಿ ವಿ | ಬೀಮಾದಿವಿ |
| ೧೬ | ತೊಡೆ[ಗಳ] | ತೊಡೆಜಘನಮುಪಾನ ದೆರಡು ।<br>ಮೆಡೆಗಳ್ ಪುಣ್ಣಾಗೆ ಪೂಸುವುದುಮ್ಮತ್ತಮುಮಂ ॥ |
| ೧೧೯-೨ | ಹೆನಗೆ ಮಾಡಿ | ನಳಿಗೆಮಾಡಿ |
| ,,-೧೩ | ಗಿಣಮಾ | ಮುರುದೊಂಡೆಯ ಮುರದದ |
| ೧೨೦-೩ | ತ್ರಿಖಿದೊಡೆ | ದಿಂದಟ್ಟುತ್ತಡಿಯನಿಡು |
| ,,-೧೦ | ಶ್ರೀವತ್ಸಳಂ | ಶ್ರೀ ವೇಷ್ಟಿತಕಂ |
| ,,-೨೩ | ಕುಂದಿ | ಕೂಂಟನಡು |
| ೧೨೧-೧೪ | ಕಾವಪುಷ್ಪ | ಕಾಚಪುಷ್ಪ |
| ೧೨೨-೧೨ | ಚಂತೆಮಾಡಿ | ಚೆಂಕೆಮಾಡಿ |
| ೧೨೪-೧ | ಕುವಿಯಂ | ಕುವಿಯಂಕುದಿರೆಗೆ ಮೆಯ್ಯೆಲ್ಲಮುಡರ್ವುದು ಬಾಹು – ಕುವಿಯನ ಮಣ್ಣಂ ಪೂಸು |
| -೪ | ೮ನೆಪದ್ಯ | ೮ನೆಯ ಪದ್ಯದಿಂದ ೨೩ನೆಯ ಪದ್ಯದವರೆಗೆ ಗ್ರಂಥಪಾತ. ಗ್ರಂಥ ನಿರಂತರ. ಪದ್ಯಸಂಖ್ಯೆ ೨೩ಕ್ಕೆ ೨೯ ಎಂದಿದೆ. |
| ೧೨೫-೧೮ | ಗುಗ್ಗುಳಮರಾ । ಗೋ | ಗುಗ್ಗುಳಮಂ ॥ ಬೆರಸಿ ಪದನರಿದು ಭಕ್ಷಣಾನಂ ।<br>ತರಮೆಯ್ದುವಿನಂ ತುರಗಪೋಷಣವಿಧಿಯಿಂ ॥ ೧೪ ॥<br>ಹೇಮಂತದೊಳಂ ಶಿಶಿ ।<br>ರೋಮಯದೊಳಂ ಹಯಮನೂಡುವುದು ಗುಗ್ಗುಳಮಂ ॥<br>ಗೋಮೂತ್ರ ಮಿಶ್ರಿತಂ...... ॥ ೧೫ ॥ |
| ೧೨೬-೪ | ಮೂಱುವತ್ಸರಂ | ಮೂಱುಸಪ್ತಕಂ |